# ಸಿದ್ಧಗಂಗಾ




ಶ್ರೀ ಕ್ಷೇತ್ರದಲ್ಲಿ ಜರುಗಿದ ಸುವರ್ಣ ಮಹೋತ್ಸವ ಸಂದರ್ಭದ ಮಹಿಳಾಗೋಷ್ಠಿಯಲ್ಲಿ ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತಿರುವುದು.

ವೇದಿಕೆಯಲ್ಲಿ-ಎಡದಿಂದ ಬಲಕ್ಕೆ ಶ್ರೀಮತಿ ಭ್ರಮರಾಂಬ ಸಂಜುಂಡಪ್ಪ, ವಿಧಾನ ಪರಿಷತ್ತಿನ ಸಭಾಧ್ಯಕ್ಷೆ ಶ್ರೀಮತಿ ಬಸವರಾಜೇಶ್ವರಿ, ಶಿಕ್ಷಣ ರಾಜ್ಯ ಸಚಿವೆ ಶ್ರೀಮತಿ ನಾಗಮ್ಮ ಕೇಶವಮೂರ್ತಿ, ಶ್ರೀಮತಿ ಪಂಕಜಾ ಮೂರ್ತಿ.

ಸೆಪ್ಟೆಂಬರ್, 1982

# ಸಿದ್ಧಗಂಗಾ

ಸಂಪುಟ—೧೮ ಸಂಚಿಕೆ - ೯ ಸೆಪ್ಟಂಬರ್, ೧೯೮೨

ಭವಾಂಬೋಧಿನಾವಂ ಸದಾಶುದ್ಧಭಾವಂ
ಶಿವಂ ಶಾಂತಮೇಕಂ ಪರಿತ್ರಾತಲೋಕಂ ।
ಶಿವಾನಂದಲಿಂಗಂ ಶಿವಾದ್ವೈತಲಿಂಗಂ
ಪರಬ್ರಹ್ಮ ಲಿಂಗಂ ಭಜೇಸಿದ್ಧಲಿಂಗಂ ॥

* * *

ಹೊತ್ತಾಱೆ ಎದ್ದು ಕಣ್ಣ ಹೊಸೆಯುತ್ತ
ಎನ್ನೊಡಲಿಂಗೆ, ಎನ್ನೊಡವೆಗೆ, ಎನ್ನ ಮಡದಿ–ಮಕ್ಕಳಿಗೆಂದು
ಕುದಿದೆನಾದರೆ ಎನ್ನ ಮನಕ್ಕೆ ಮನವೇ ಸಾಕ್ಷಿ!
"ಆಸನೇ ಶಯನೇ ಯಾನೇ । ಸಂಪರ್ಕೇ ಸಹಭೋಜನೇ
ಸಂಚರಂತಿ ಮಹಾಘೋರೇ । ನರಕೇ ಕಾಲಮಕ್ಷಯಂ
ಎಂಬ ಶ್ರುತಿಯ ಬಸವಣ್ಣನೋದುವನು" ಎಂಬರು,
"ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳಿರ್ದು
ಓಲೈಸಿಹ" ನೆಂದು ನುಡಿವರಯ್ಯಾ ಪ್ರಮಥರು.
ಕೊಡುವೆನುತ್ತರವನವರಿಗೆ, ಕೊಡಲಮ್ಮುವೆ
ಹೊಲೆಯ ಹೊಲೆಯರ ಮನೆಯ ಹೊಕ್ಕು
ಸಲೆ ಕೈಕೂಲಿಯ ಮಾಡಿಯಾದರೆಯೂ
ನಿಮ್ಮ ನಿಲವಿಂಗೆ ಕುದಿವೆನಲ್ಲದೆ,
ಎನ್ನೊಡಲವಸರಕ್ಕೆ ಕುದಿದೆನಾದರೆ
ತಲೆ ದಂಡ ! ಕೂಡಲಸಂಗಮದೇವಾ.

—ಬಸವಣ್ಣ

# ಈ ಸಂಚಿಕೆಯಲ್ಲಿ



## ಚಂದಾದಾರರಲ್ಲಿ ವಿನಂತಿ

1982 ನೆಯ ವರ್ಷದ ಚಂದಾ ನಂಬರ್ ಗುರುತಿಸಿಕೊಳ್ಳಿ. ವಿಳಾಸ ಬದಲಾವಣೆ ಮುಂತಾದ ವಿಚಾರಗಳಲ್ಲಿ ನಮ್ಮೊಡನೆ ವ್ಯವಹರಿಸುವಾಗ ತಮ್ಮ ಚಂದಾ ನಂಬರ್ ಮತ್ತು ನಮ್ಮ ಪ್ರತಿನಿಧಿಗಳ ಹೆಸರನ್ನು ಬರೆಯುವುದನ್ನು ಮರೆಯಬೇಡಿ. ಚಂದಾ ಬಾಕಿ ಇರುವವರು ಸಂದಾಯಮಾಡಿ, ಸದಸ್ಯತ್ವವನ್ನು ಮುಂದುವರಿಸಿಕೊಂಡು 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿರಿ. ಸಿದ್ಧಗಂಗಾ ತರಿಸಿಕೊಳ್ಳುವಂತೆ ತಮ್ಮ ಬಂಧು ಮಿತ್ರರು ಮತ್ತು ಹಿತೈಷಿಗಳನ್ನು ಪ್ರೋತ್ಸಾಹಿಸಿ.



# ಶ್ರೀವಾಣಿ

ಒಂದೂರಿನಲ್ಲಿ ಒಬ್ಬ ವರ್ತಕನಿದ್ದ. ಅವನೊಬ್ಬ ಮಹಾ ಕಪಟ ಶಿವಭಕ್ತ. ಅಳೆವಾಗ, ತೂಕ ಮಾಡುವಾಗ, ಯಾವಾಗಲೂ 'ಶಿವ ಶಿವ' ಎನ್ನುತ್ತಿದ್ದ. ಬಾಯಲ್ಲಿ ಶಿವಮಂತ್ರೋಚ್ಚಾರಣೆ; ಕೈಯಲ್ಲಿ ಮಹಾಮೋಸದಾಚರಣೆ. ಪಂಚೇರಿಗೆ ಸೇರೇ ಇಲ್ಲ: ಮಣಕ್ಕೆ ಪಂಚೇರೇ ಇಲ್ಲ. ಇವನ ಮೋಸ ಕಂಡು ಆ ಊರಿನ ಒಬ್ಬಾತ 'ಸರಿಯಾಗಿ ಬುದ್ಧಿ ಕಲಿಸಬೇಕು' ಎಂದುಕೊಂಡ. ಒಂದು ದಿವಸ ಧೈರ್ಯಮಾಡಿ ಕೇಳಿಯೇ ಬಿಟ್ಟ: "ಏನು ಶೆಟ್ಟರೇ! ಇಷ್ಟೊಂದು ಅಳತೆ ಕಡಮೆ ಇದೆಯಲ್ಲಾ?" "ಅಯ್ಯೋ! ಶಿವ ಶಿವಾ! ಕೊಟ್ಟವನೂ ಶಿವನೇ ತೆಗೆದುಕೊಂಡವನೂ ಶಿವನೆ. ಕಮ್ಮಿ ಕೊಟ್ಟವರಾರು? ತೆಗೆದುಕೊಂಡವರಾರು?" ಶೆಟ್ಟಿ ವಿನಯದಿಂದ ನುಡಿದ. ಆಗ ಆ ಮನುಷ್ಯ ರೇಗಿ ಕಪಾಳಸೇವೆಯನ್ನು ಕೊಟ್ಟೇಬಿಟ್ಟ ಮತ್ತು ಹೇಳಿಯೂ ಬಿಟ್ಟ: "ಕಪಾಳಕ್ಕೆ ಹೊಡೆದವನೂ ಶಿವನೆ; ಹೊಡೆಸಿಕೊಂಡವನೂ ಶಿವನೆ".

ಬಾಯಲ್ಲೊಂದು ಆಡಿ ಕೈಯಲ್ಲೊಂದು ಮಾಡಿದರೆ ಹೀಗೆ ಆಗುವುದು.

"ಸಿದ್ಧಗಂಗಾ" ಮಾಸ ಪತ್ರಿಕೆ

ಪ್ರಕಾಶಕರು

ಹೆಚ್.ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

ಸಂಪಾದಕ ಮಂಡಲಿ

ಪಂ॥ ಚನ್ನಪ್ಪ ಎರೇಸೀಮೆ

ಪಿ. ಎನ್ ಚಂದ್ರಶೇಖರಯ್ಯ

ಬಸವರಾಜು

ಎಂ. ರೇಣುಕಾರಾಧ್ಯ

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ವಾರ್ಷಿಕ ಚಂದಾ 15-00 ರೂ

ಆಜೀವ ಸದಸ್ಯತ್ವ 151-00 ರೂ

ಪ್ರಕಾಶಕರು

'ಸಿದ್ಧಗಂಗಾ' ಮಾಸಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಪುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೇಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗ ಕಳಿಸಿಕೊಡಬೇಕಾಗಿ ಪ್ರಾರ್ಥನೆ.



# ಸಂಪಾದಕೀಯ

ಕಳೆದ ವರ್ಷ ತಾ॥ 27-8-81ರ ಶುಕ್ರವಾರ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ ಶಿವಯೋಗ ಸಮಾಧಿ ಕಟ್ಟಡದ ಶಂಕುಸ್ಥಾಪನೆ ನೇರವೇರಿತು. ಮಂಗಳ ಮುಹೂರ್ತದಲ್ಲಿ ಪ್ರಾರಂಭಗೊಂಡ ಕಾರ್ಯ ಶುಭಾರಂಭ. ಸದ್ಯದಲ್ಲಿ ಕಟ್ಟಡದ ಕಾರ್ಯ ಹಂತಹಂತವಾಗಿ ಮೇಲೇರಿ ಬರುತ್ತಿರುವುದು ನಿರೀಕ್ಷಿಸಿದಂತೆಯೇ ಇದೆ. ಶ್ರೀ ಸನ್ನಿಧಿಯವರ ಕೋಟ್ಯಾವಧಿಕ ಕಾರ್ಯಬಾಹುಳ್ಯದಲ್ಲಿ ಗದ್ದುಗೆ ನಿರ್ಮಾಣ ಕಾರ್ಯ ತೃಪ್ತಿತರುವಂತಹದು. ಶ್ರೀಮಠದ ಅಭಿಮಾನೀ ಭಕ್ತವೃಂದದವರ ತ್ಯಾಗಮಯ ಜೀವನ ಬೆಂಬಲವಾಗಿ ನಿಂತಿದೆ. ಗುದ್ದಲಿಪೂಜಾ ಸಮಾರಂಭದಲ್ಲಿ ಅನೇಕ ಮಂದಿ ಪುಣ್ಯಶೀಲರು ತಾವು ಕೊಡುವ ಕಾಣಿಕೆಯನ್ನು ವಾಗ್ದಾನ ಮಾಡಿ ಸಭೆಗೆ ತಿಳಿಸಿದುದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದು. ಈ ಕೊಡುಗೆ ಯಾವ ವಿಧವಾದ ಬಲತ್ಕಾರ ಪ್ರಭಾವದ ಪ್ರತಿಫಲವಲ್ಲ. ಇದು ಶ್ರೀ ಶ್ರೀಗಳವರು ಮಾಡಿರುವ ಮಾಡುತ್ತಿರುವ ಲೋಕೋಪಕಾರಕ ಕಾರ್ಯ ಚಿಂತನೆಯನ್ನು ಕಂಡು ಹರ್ಷಪುಲಕಿತರಾಗಿ ಆತ್ಮಸಂತೋಷದಿಂದ ನಿವೇದಿಸಿದ ನೈವೇದ್ಯ. ಆ ಅರ್ಪಣೆ ಸತ್ಕಾರ್ಯಕ್ಕೆ ವಿನಿಯೋಗ ಎಂಬುದು ಶ್ರೀ ಕ್ಷೇತ್ರಕ್ಕೆ ಒಮ್ಮೆ ಭೇಟಿ ಕೊಟ್ಟರೆ ಸಾಕು ತಾನಾಗಿಯೇ ಅರಿವಿಗೆ ಬರುತ್ತದೆ. ಇನ್ನೊಬ್ಬರ ಮಾರ್ಗದರ್ಶನವಾಗಲೀ, ಬೋಧನೆಯ ಅಗತ್ಯವಾಗಲೀ ಬೇಕಿಲ್ಲ. ಮೊನ್ನೆ ತಾನೆ ಶ್ರೀ ಶ್ರೀಗಳವರ ಸುವರ್ಣ ಮಹೋತ್ಸವ ಸಮಾರಂಭದಲ್ಲಿ ಭಾಗವಹಿಸಿದ್ದ ಭಕ್ತಸಮೂಹ ಇದಕ್ಕೆ ನಿದರ್ಶನ. ಊಹೆಗೆ ನಿಲುಕದ ಉಪಮೆಗೆ ಬಾರದುದಾಗಿತ್ತು. ಒಬ್ಬ ಸಂತರು ಅಪ್ಪಣೆ ಕೊಡಿಸಿದ್ದುಂಟು. ಶಿವಯೋಗೀವರ್ಯರ, ಸಂತರ ದರ್ಶನ, ಸ್ಪರ್ಶನ ಭಾಗ್ಯ ದೊರೆಯುವುದು ಜನ್ಮಾಂತರದ ಸುಕೃತಫಲ ಎಂದು. ಅದರಲ್ಲೂ ಅವರ ಕಾಲದಲ್ಲಿ ಜೀವಿಸಿರುವುದು ಜನ್ಮಸಾರ್ಥಕ್ಯ ತರುವಂತಹದು. ಪೂಜ್ಯರ ಸೇವಾಭಾಗ್ಯದ ಕಾರ್ಯ ಅಸದಳವಾದುದು. ಅವರ ತಪೋಜ್ಞಾನ ಶ್ರೀಮಂತವಾದುದು. ಆ ಜ್ವಾಲೆಯ ತೀಕ್ಷ್ಣತೆಯಲ್ಲಿ ಚಂದ್ರಮನ ಶೈತ್ಯತೆ ಇದೆ. ಅಮೃತವರ್ಷಧಾರೆ ಸಚ್ಚೇತನಕಾರ್ಯವಡಗಿದೆ. ಅದನ್ನು ಅನುಭವಿಸಿದಷ್ಟು ತೃಪ್ತಿ. ಆ ದಿವ್ಯ ಜ್ಯೋತಿಯ ದೀದಿತಿ ಸದಾಕಾಲ ನಮಗೆ ದೊರಕಲೆಂಬುದರ ಸಂಕೇತ ಶಿವಯೋಗ ಸಮಾಧಿಯ ನಿರ್ಮಾಣ. ಪೂಜ್ಯರ ಚೇತನ ಪ್ರಭೆಯು ಎಂದೆಂದಿಗೂ ನಾಡಿಗೆ ದೊರಕಲೆಂದು ನಾಡಿನ ಭಕ್ತವೃಂದ ಈ ಮಹತ್ಕಾರ್ಯದಲ್ಲಿ ಭಾಗಿಗಳಾಗಿರುವುದು ನಮ್ಮ ನಾಡಿನ ಭಾಗ್ಯವೇ ಸರಿ.

# ನವನೀತ

ಅಸಹಾಯಃ ಸಮರ್ಥೋಽಪಿ ತೇಜಸ್ವೀ ಕಿಂ ಕರಿಷ್ಯತಿ।
ನಿರ್ವಾತೇ ಜ್ವಲಿತೋ ವಹ್ನಿಃ ಸ್ವಯಮೇವ ಪ್ರಶಾಮ್ಯತಿ॥

—ಪಂಚತಂತ್ರ

ವ್ಯಕ್ತಿ ಸಮರ್ಥನಾಗಿದ್ದರೂ ಒಬ್ಬ ತೇಜಸ್ವಿಯಾದವನ ಸಹಾಯವಿಲ್ಲದಿದ್ದರೆ ಏನನ್ನು ತಾನೆ ಮಾಡಬಲ್ಲ? ಉರಿಯುವ

ಅನೇಕ ಮಠಾಧಿಪತಿಗಳು, ಸುತ್ತಮುತ್ತಲ ಗ್ರಾಮೀಣ ಬಸವತತ್ವ ಪ್ರೇಮಿಗಳೂ
ಆಗಮಿಸಿದ್ದರು. ಶ್ರೀ ಹೆಚ್.ವಿ.ವೀರಭದ್ರಯ್ಯನವರು ಪ್ರಾರಂಭದಲ್ಲಿ ಸ್ವಾಗತಿಸಿದರು.
ಶ್ರೀ ಬಿ. ವೀರಭದ್ರಯ್ಯನವರು ಸಭೆಗೆ ವಂದಿಸಿದರು. ಪಂಡಿತ ಶ್ರೀ ಚನ್ನಪ್ಪ
ಎರೇಸೀಮೆಯವರು ಮುಕ್ತಾಯದಲ್ಲಿ ಮಂಗಳ ಹಾಡಿದರು. ಸಭೆಯೆಲ್ಲವೂ ಶ್ರೀ
ಚರಣದಲ್ಲಿ ನಮಿಸಿ, ಮುಕ್ತಾಯಗೊಂಡಿತು.

---

## ಸನ್ಯಾಸಿ ಸಮುದಾಯಕ್ಕೇ ಮೇಲ್ಪಂಕ್ತಿ

—ಡಾ॥ ಮಾಸ್ತಿವೆಂಕಟೇಶ ಐಯಂಗಾರ್

ಸಂನ್ಯಾಸ ಸುಲಭವಲ್ಲ. ಸಂನ್ಯಾಸಿಗಳು ತಪ್ಪಿನಡೆದು, ಆಶ್ರಮಕ್ಕೆ ಕೆಟ್ಟಹೆಸರು
ಬಂದಿರುವುದು ಒಮ್ಮೆ ಅಲ್ಲ ಇನ್ನೊಮ್ಮೆ ಅಲ್ಲ ನೇರಾ. ಇದು ತೀರ ಇಂದಿನ ಮಾತೂ
ಅಲ್ಲ. ಈ ವಿಷಯ ವಚನ ಕಾವ್ಯದಲ್ಲಿ ನಿಷ್ಠುರವಾದಿಯಾಗಿದ್ದ ಚೆನ್ನಬಸವಣ್ಣ
ನವರು ಆ ಹೊತ್ತಿನ ಜೀವನವನ್ನು ನೋಡಿ "ನಿರಿಸೋಕಿದೊಡೆ ಯತಿಯಲ್ಲ" ಎಂದರು.
ಆಶ್ರಮ ಇರಲೇಬೇಕು ಎನ್ನುವವರು ಈ ನಿತ್ಯ ಸತ್ಯವನ್ನು ಮನಸ್ಸಿನಲ್ಲಿಟ್ಟುಕೊಂಡು
ಆಶ್ರಮ ಸ್ವೀಕಾರವನ್ನು ಕುರಿತು ಯುಕ್ತವಾದ ಕ್ರಮಗಳನ್ನು ನಿಯಮಿಸಬೇಕು.
ಅಂದ ಮೇಲೆ ಒಂದು ಮಾತನ್ನು ಅವಶ್ಯ ಒಪ್ಪಿಕೊಳ್ಳಬೇಕು. ಎಷ್ಟೋ ಕಷ್ಟ
ವಾದ ನಿಯಮಗಳನ್ನು ಸಹಿಸಿ ಕೆಲವರು ಸ್ವಾಮಿಗಳು ಶುಚಿಯಾದ ಬಾಳನ್ನು ಬಾಳಿ
ಸಮಾಜದ ಕ್ಷೇಮಕ್ಕೆ ಸಾಧಕವಾದ ಕಾರ್ಯಕ್ರಮಗಳನ್ನು ಕೈಗೊಂಡು ನಡೆಸಿ,
ಆಶ್ರಮಕ್ಕೆ ಭೂಷಣರಾಗಿ ಮೊಳಗಿದ್ದಾರೆ. ನನಗೆ ತಿಳಿದ ಇಬ್ಬರ ಹೆಸರನ್ನು ನಾನು
ಹೊಗಳಬೇಕು. ಉಡುಪಿಯ ಪೇಜಾವರ ಶ್ರೀಗಳಾದ ಶ್ರೀ ವಿಶ್ವೇಶ್ವರ ತೀರ್ಥ
ಶ್ರೀ ಪಾದಂಗಳವರು ಆದರ್ಶ ಸನ್ಯಾಸ ಜೀವನವನ್ನು ನಡೆಸಿ ಹಿಂದೂ ಸಮಾ
ಜದ ಕ್ಷೇಮಕ್ಕಾಗಿ ಅಮೂಲ್ಯಸೇವೆಯನ್ನು ಸಲ್ಲಿಸುತ್ತಿದ್ದಾರೆ. ಸಿದ್ಧಗಂಗೆ ಶ್ರೀ
ಶ್ರೀ ಶಿವಕುಮಾರ ಸ್ವಾಮಿಗಳವರು ಶಿಷ್ಯರ ಜೀವನದಲ್ಲಿ ಪ್ರಭಾವಯುತರಾಗಿ
ಬೆಳೆದು, ತಮ್ಮ ಪೀಠದ ವರಮಾನವನ್ನು ನೂರು ಪಟ್ಟು ಹೆಚ್ಚಿಸಿ, ಅದನ್ನು
ಶಿಷ್ಯರ ಕ್ಷೇಮಕ್ಕಾಗಿ ಎಲ್ಲ ರೀತಿಯ ವಿದ್ಯೆನೀಡುವ ಸಂಸ್ಥೆಗಳ ನಿರ್ಮಾಣ
ಕ್ಕಾಗಿ ಬಳಸಿ ಸಂನ್ಯಾಸ ಸಮುದಾಯಕ್ಕೇ ಮೇಲ್ಪಂಕ್ತಿಯಾಗಿದ್ದಾರೆ. ಕೆಟ್ಟ
ದೆನ್ನುವ ಈ ಕಾಲದಲ್ಲಿ ಸಹ ಸನಾತನ ಧರ್ಮ ಇಂಥ ಶ್ರೇಷ್ಠ ಪುರುಷರನ್ನು
ಪಡೆದಿದೆ ಎನ್ನುವುದು; ಅದು ಈಗಲೂ ಜೀವಂತವಾಗಿದೆ ಎನ್ನುವುದನ್ನು
ಸಿದ್ಧಾಂತ ಮಾಡುತ್ತದೆ.

(ತಾ॥ 19-9-1982 ರ ಭಾನುವಾರ ಕನ್ನಡ ಪ್ರಭದ ವಾಙ್ಮಯ ವಿಹಾರ ವಿಭಾಗ
ದಲ್ಲಿನ "ಗುರುಪೀಠದಲ್ಲಿ ತಾರತಮ್ಯ; ಜನಮನದಲ್ಲಿ ವೈಷಮ್ಯ" ಎಂಬ ಶೀರ್ಷಿಕೆಯಿಂದ)



## ಇಂದ್ರಿಯ ನಿಗ್ರಹ

ಪ್ರಪಂಚದಲ್ಲಿ ಸರ್ವ ಜೀವಿಗಳಿಗೂ ಸುಖದ ಬಯಕೆಯು ಸ್ವಾಭಾವಿಕ
ವಾದುದು. ಜೀವಕೋಟಿಯಲ್ಲಿ ಅಗ್ರಸ್ಥಾನವನ್ನು ಗಳಿಸಿರುವ ಮಾನವನಾದರೋ
ವಿಶಿಷ್ಟ ವ್ಯಾಪಾರಗಳಲ್ಲಿ ಪ್ರವೃತ್ತನಾಗಿರುವುದು ಸುಖದ ಬಯಕೆಯಿಂದಲೇ. ಪರ
ಮಾತ್ಮನಿಂದ ಅನುಗ್ರಹಿಸಲ್ಪಟ್ಟಿರುವ ಕ್ರಿಯಾಶಕ್ತಿ, ವಾಕ್‌ಶಕ್ತಿ, ಧೀಶಕ್ತಿಗಳೆಲ್ಲವನ್ನು
ಬೆಳೆಸಿಕೊಂಡು ಅವುಗಳನ್ನು ಅಧಿಕಸುಖ ವ್ಯಾಪ್ತಿಗಾಗಿ ವಿನಿಯೋಗಿಸುತ್ತಾನೆ. ಬಂದ
ದ್ದನ್ನು ಕಿರಿದು ಮಾಡಿ, ಬಾರದ್ದನ್ನು ಹಿರಿದು ಮಾಡಿ, ತೃಪ್ತಿಯಿಲ್ಲದೆ ಅಲಭ್ಯವಾದ
ದ್ದನ್ನೇ ಇಚ್ಛಿಸಿ ಧಾವಿಸುತ್ತಾನೆ. ವೈಜ್ಞಾನಿಕರು ಸೃಷ್ಟಿಯ ಗರ್ಭದಲ್ಲಿ ಅಡಗಿರುವ
ಅದ್ಭುತಶಕ್ತಿಗಳನ್ನು ಕಂಡುಹಿಡಿದು, ಅದನ್ನು ಹೊರಗೆಡವಿ ಅನಂತ ಸಂಶೋಧನೆ
ಗಳನ್ನು ಮಾಡಿ ಯಂತ್ರಗಳನ್ನು ನಿರ್ಮಾಣ ಮಾಡುತ್ತಿರುವ ಉದ್ದೇಶವೂ ಸುಖದ
ಬಯಕೆಯೆನ್ನುವುದು ಸರ್ವವೇದ್ಯವಾಗಿದೆ. ಅಲ್ಪ ಶ್ರಮದಿಂದ ಅಧಿಕ ಸುಖವನ್ನು
ಹೊಂದಬೇಕೆಂಬ ಆಕಾಂಕ್ಷೆಯಿಂದ ಹಿಂದೆ ಅವನಿಗೆ ಪ್ರಾಪ್ತವಾಗದಿರುವ ಸುಖಗಳನ್ನು
ದೊರಕಿಸಿಕೊಡುವ ಇಚ್ಛೆಯಿಂದ ಮನುಷ್ಯನಿಗೆ ಯಂತ್ರೋಪಕರಣಗಳ ನೆರವನ್ನು
ಒದಗಿಸಿಕೊಟ್ಟು ಅವನ ಸ್ವಾಭಾವಿಕ ಬಯಕೆಯನ್ನು ಪೂರೈಸುವ ಕೀರ್ತಿಯನ್ನು
ಹೊಂದಿರುವುದಾಗಿ ಸಂತುಷ್ಟರಾಗಿದ್ದಾರೆ. ಎಲ್ಲ ರಾಷ್ಟ್ರಗಳು, ಎಲ್ಲ ಜನಾಂಗಗಳು
ಅನುಭವಿಸುತ್ತಿರುವ ಸುಖವನ್ನು ಸೂರೆಗೊಂಡು ಕೆಲವೇ ಜನಾಂಗಗಳ ಸ್ವತ್ತಾಗಿ
ಮಾಡಬೇಕೆನ್ನುವ ಹಾಗೂ ಎಲ್ಲರನ್ನೂ ಪಾದಾಕ್ರಾಂತವನ್ನಾಗಿ ಮಾಡಿ ತಾವು ಮತ್ತು
ತಮ್ಮ ಜನಾಂಗ ಅತ್ಯುನ್ನತ ಸುಖವನ್ನು ಹೊಂದಬೇಕೆಂಬ ರಾಕ್ಷಸೀ ಮಹತ್ವಾ
ಕಾಂಕ್ಷೆಯೇ ಭಯಂಕರವಾದ ಮಾರಣಾಸ್ತ್ರಗಳ ಸಂಶೋಧನೆಗೂ ನಿರ್ಮಾಣಕ್ಕೂ
ಮೂಲಹೇತುವಾಗಿದೆ.

ಮಾನವನು ಚರ್ಮಚಕ್ಷುವಿಗೆ ಗೋಚರವಾಗುತ್ತಿರುವ ಐಂದ್ರಿಯಿಕಾನುಭವದ
ವ್ಯಾಪ್ತಿಗೆ ಒಳಪಟ್ಟಿರುವ ಭೌತಿಕ ವಸ್ತುಗಳಿಂದಲೇ, ಭೋಗ ಜೀವನದಿಂದಲೇ, ನಿಜ
ವಾದ ಸುಖವು ಪ್ರಾಪ್ತಿಯಾಗುವುದೆನ್ನುವ ಹಂಬಲವುಳ್ಳವನಾಗಿರುತ್ತಾನೆ. ಅಂತೆಯೇ
ಅವನ ಧ್ಯೇಯ ಧೋರಣೆಗಳು; ಕಾರ್ಯಚಟುವಟಿಕೆಗಳು ಇಂದು ಗೋಚರವಾಗುತ್ತಿ
ರುವ ರೂಪನ್ನು ತಾಳಿವೆ. ವಾಸ್ತವಿಕವಾಗಿ ಮನುಷ್ಯಸಾಮಾನ್ಯನು ಇಂದು ಹೊಂದಿ
ರುವ ತಿಳುವಳಿಕೆಯು ಸಾಧುವಾಗಿರುವುದೇ ? ಅವನು ಗಮನಿಸುತ್ತಿರುವ ಮಾರ್ಗ
ದಲ್ಲಿ ಮುಂದುವರಿದರೆ ಅವನ ಇಚ್ಛೆಯ ವಸ್ತುವಾದ ಸುಖದ ಆತ್ಯಂತಿಕ ಕಲ್ಪನೆಯು
ಅವನಿಗೆ ಪೂರೈಸಬಹುದೇ ? ಎನ್ನುವುದು ವಿರ್ಚಾರಾರ್ಹವಾದ ಅಂಶವು.

ಸಾಮಾನ್ಯ ಮನುಷ್ಯನ ದೃಷ್ಟಿಯಲ್ಲಿ ಸುಖವೆಂದು ಭಾವಿಸಿರುವ ವಸ್ತುವಿನ
ಪ್ರಾಪ್ತಿಗಾಗಿ ಅವನ ಇಂದ್ರಿಯಗಳು ಸಾಧನೆಗಳಾಗಿರುತ್ತವೆ. ಬಾಹ್ಯ ವಸ್ತುಗಳನ್ನು
ಭೋಗಿಸುವುದರಿಂದ ಉಂಟಾಗುವ ತಾತ್ಕಾಲಿಕ ಸುಖವನ್ನು ಪರಮ ಸುಖವೆಂದು
ನಂಬಿ ಭೋಗಲಾಲಸೆಯಲ್ಲಿ ಮಗ್ನನಾಗಿ ತನ್ನ ಬಾಳನ್ನು ಹಾಳುಮಾಡಿಕೊಳ್ಳುತ್ತಿ
ದ್ದಾನೆ. ಐಂದ್ರಯಿಕ ಸುಖದ ಕಲ್ಪನಾ ಸಾಮ್ರಾಜ್ಯದಲ್ಲಿ ವಿಹರಿಸುತ್ತಿರುವ ಮನು
ಷ್ಯನು ಕ್ಷಣಭಂಗುರಗಳೂ ಆಪಾತರಮಣೀಯಗಳೂ ಪರಿಣಾಮವಿರಸಗಳೂ
ಆದ ಸುಖಗಳನ್ನು ನಂಬಿ ಭ್ರಾಂತನಾಗಿ ಕಡೆಗೆ ಅನಂತ ದುಃಖಗಳನ್ನೂ ಅನುಭವಿಸು
ತ್ತಾನೆ. ಈ ತಪ್ಪು ಕಲ್ಪನೆಯು ವಿಷಮ ದೃಷ್ಟಿಯು ಮಾಯವಾಗಿ ಜಗದುದ್ಧಾರ
ಕರ್ತೃಗಳಾದ ಮಹಾನುಭಾವರು ನಿಲ್ಲಿಸಿರುವ ಅಮರ ಸಂದೇಶಗಳನ್ನು ಅರಿತು ಆಚರಿ
ಸುವ ದೃಢ ಪ್ರಯತ್ನ ಮಾಡದ ಹೊರತು ಮಾನವನಿಗೆ ನಿಜ ಸುಖವು ಲಭಿಸಲಾರದು.
"ಸಕಲೇಂದ್ರಿಯಗಳಲ್ಲಿ ವಿಹರಿಸುವ ಮನವ ಸೆಳೆದು ನಿಂದಾತನೇ ಸುಖಿ, ಪಂಚೇಂದ್ರಿ
ಯಗಳಿಚ್ಛೆಯಲ್ಲಿ ಕೀಳು ಮನಗೊಂಡು ಸುಳಿಗೊಂಡವನಾತನೇ ದುಃಖಿ, ಮನವು
ಬಹಿರ್ಮುಖವಾದರೆ ಮಾಯಾಪ್ರಪಂಚ, ಮನವಂತರ್ಮುಖವಾದರೆ ಅವಿರಳ ಜ್ಞಾನಿ"
ಯೆಂದು ನುಡಿದು ನಿಜಸುಖದ ಪ್ರಾಪ್ತಿಗಾಗಿ ಸಂಯಮಿತ ಜೀವನದಿಂದ ಕೂಡಿದ
ಅಂತರಂಗ ಸಾಧನೆಯು ಅವಶ್ಯಕವೆಂದು ಸಾರಿರುವರು.

ಸಂಯಮಿತ ಜೀವನವೂ ಅರ್ಥಾತ್ ಬ್ರಹ್ಮಚರ್ಯೆಯು ಸುಖದ ಮೂಲ
ಹೇತುವು. ಮಾನವ ಜೀವಿತದ ಸಾರಸರ್ವಸ್ವವು. ಮಹಾ ಕಲ್ಯಾಣದಾಯಕವು.
ಬ್ರಹ್ಮಚರ್ಯೆಯು ವ್ಯಾಪಕವಾದ ಅರ್ಥವುಳ್ಳದ್ದಾಗಿದ್ದರೂ ಸ್ತ್ರೀಪುರುಷ ಸಂಬಂಧವಾದ
ಪ್ರೇಮ ವ್ಯವಹಾರದಲ್ಲಿ ಅತ್ಯವಶ್ಯಕವಾದ ನಿಯಮ ಪಾಲನೆಯ ವಿಚಾರದಲ್ಲಿ, ಜೀವನ
ಸತ್ವವಾದ ವೀರ್ಯಸಂರಕ್ಷಣೆಯ ವಿಚಾರದಲ್ಲಿ ಅದನ್ನು ಬಳಸುವುದು ಒಂದು ಪದ್ಧತಿ
ಯಾಗಿದೆ.

ಧರ್ಮ, ಸಂಸ್ಕೃತಿ, ಆಧ್ಯಾತ್ಮಿಕತೆಯ ಪವಿತ್ರ ತತ್ವಗಳ ಮೇಲೆ ಉಳಿದು
ಬೆಳೆದು ತನ್ನ ವೈಶಿಷ್ಟ್ಯವನ್ನು ಉಳಿಸಿಕೊಂಡು ಬಾಳನ್ನು ಬೆಳಗಿಕೊಂಡು ಬಂದಿರುವ
ನಮ್ಮೀ ಭರತಖಂಡದಲ್ಲಿ ಪ್ರಾಚೀನ ಕಾಲದಿಂದಲೂ ಬ್ರಹ್ಮಚರ್ಯ ರಕ್ಷಣೆಗೆ ವಿಶೇಷ
ಮಹತ್ವವನ್ನು ಕೊಟ್ಟಿದ್ದರು. ಜಗತ್ತಿನ ಪ್ರಾಚೀನತಮ ಗ್ರಂಥಗಳಾದ ವೇದಗಳು
ಸಹ ಇದರ ಶ್ರೇಷ್ಠತೆಯನ್ನು ಹೊಗಳಿ ಬ್ರಹ್ಮಚರ್ಯದಿಂದಲೇ ಮನುಷ್ಯನ ಸರ್ವಶಕ್ತಿ
ಗಳೂ ಶುದ್ಧವಾಗಿ ವಿಪುಲತೆಯನ್ನು ಪಡೆಯುವುದೆಂದು ಸಾರಿವೆ. "ಬ್ರಹ್ಮಚರ್ಯೇಣ
ತಪಸಾ ರಾಜಾ ರಾಷ್ಟ್ರಂಹಿ ರಕ್ಷತಿ । ಆಚಾರ್ಯೋ ಬ್ರಹ್ಮಚರ್ಯೇಣ ಬ್ರಹ್ಮಚಾರಿಣ
ಮಿಚ್ಛತೇ ॥ ಬ್ರಹ್ಮಚರ್ಯೇಣ ತಪಸಾ ದೇವಾ ಮೃತ್ಯುಂ ಅಪಘ್ನತಾ । ಇಂದ್ರೋಹಿ
ಬ್ರಹ್ಮಚರ್ಯೇಣ ದೇವೇಭ್ಯಃ ಸ್ವರಾಭರತ್॥" ಬ್ರಹ್ಮಚರ್ಯರೂಪೀ ತಪಸ್ಸಿನಿಂದಲೇ
ರಾಜನು ಪ್ರಜೆಗಳನ್ನು ಸಂರಕ್ಷಣೆ ಮಾಡುತ್ತಾನೆ. ಆಚಾರ್ಯನು ಬ್ರಹ್ಮಚಾರಿ



ಯಾಗಿರತಕ್ಕ ಶಿಷ್ಯನನ್ನು ಇಚ್ಛಿಸುತ್ತಾನೆ. ಬ್ರಹ್ಮಚರ್ಯೆಯಿಂದಲೇ ದೇವತೆಗಳು
ಮೃತ್ಯುವನ್ನು ಜಯಿಸಿದರು. ಬ್ರಹ್ಮಚರ್ಯೆಯಿಂದಲೇ ಇಂದ್ರನು ದೇವತೆಗಳಿಗೆ
ಸ್ವರ್ಗ ಸಂಪತ್ತನ್ನು ತಂದುಕೊಟ್ಟನು.

ಬ್ರಹ್ಮಚಾರೀ ಸಿಂಚತಿಸಾನೋಕೇತಃ ಪೃಥಿವ್ಯಾಂ
ತೇನ ಜೀವಂತಿ ಪ್ರಾದಿಶಶ್ ಚತಸ್ರಃ ॥

ಬ್ರಹ್ಮಚಾರಿಯು ತನ್ನ ತೇಜೋಶಕ್ತಿಯನ್ನೂ ಪೃಥ್ವಿಯ ಮೇಲೆ ಎರಚುತ್ತಾನೆ.
ಈ ಶಕ್ತಿಯಿಂದಲೇ ಸರ್ವವೂ ಜೀವಿಸುತ್ತಿದೆ.

ಅರ್ವಾಗ್ ಅನ್ಯಃ ಪರೋ ಅನ್ಯೋ ದಿವಸ್ ಪೃಷ್ಠಾತ್
ಗುಹಾನಿಧೀ ನಿಹಿತೋ ಬ್ರಾಹ್ಮಣಸ್ಯ
ತಾ ರಕ್ಷತಿ ತಪಸಾ ಬ್ರಹ್ಮಚಾರೀ
ತತ್ ಕೇವಲಂ ತೃಣುತೇ ಬ್ರಹ್ಮವಿದ್ವಾನ್

ಪರಾ ಅಪರಾ ಎಂಬೆರಡು ಪವಿತ್ರವಾದ ನಿಧಿಗಳು ಬ್ರಹ್ಮಚಾರಿಯಿಂದ ರಕ್ಷಣೆ
ಮಾಡಲ್ಪಡುತ್ತವೆ. ಬ್ರಹ್ಮಚರ್ಯೆಯಿಂದ ಬ್ರಹ್ಮಜ್ಞಾನ ಪಡೆದ ತಪಸ್ವಿಯು ಇವು
ಗಳನ್ನು ಸ್ವಾಧೀನ ಮಾಡಿಕೊಳ್ಳುತ್ತಾನೆ.

ಈ ಮುಂತಾದ ಇನ್ನೂ ಅನೇಕ ಪವಿತ್ರ ವಾಣಿಗಳು ಬ್ರಹ್ಮಚರ್ಯೆಯ
ಹಿರಿಮೆಯನ್ನು ಹೊಗಳಿವೆ.

ನ ತಪಸ್ತಪ ಇತ್ಯಾಹುರ್ಬ್ರಹ್ಮಚರ್ಯಂತಪೋತ್ತಮಂ।
ಊರ್ಧ್ವಕೇತಾಭವೇದ್ಯಸ್ತು ಸ ದೇವೋ ನತು ಮಾನುಷಂ॥

ಬ್ರಹ್ಮಚರ್ಯೆಯೇ ಶ್ರೇಷ್ಠವಾದ ತಪಸ್ಸು. ಬ್ರಹ್ಮಚರ್ಯೆ ರಕ್ಷಣೆ ಮಾಡಿಕೊಂಡಿರು
ವವನು ಮನುಷ್ಯರಲ್ಲಿ ದೇವನು.

ಆಯುಸ್ತೇಜೋಬಲಂ ವೀರ್ಯಂ ಪ್ರಜ್ಞಾಶ್ರೀಶ್ಚಮಹದ್ಯಶಃ॥
ಪುಣ್ಯಂಚ ಮತ್ಪ್ರಿಯತ್ವಂಚ ಹನ್ಯತೇ ಬ್ರಹ್ಮಚರ್ಯಯಾ॥

ಬ್ರಹ್ಮಚರ್ಯ ರಕ್ಷಣೆ ಮಾಡದಿರುವುದರಿಂದ ಆಯುಸ್ಸು ತೇಜಸ್ಸು ಶಕ್ತಿ ಪರಾಕ್ರಮ
ಬುದ್ಧಿ ಸಂಪತ್ತು ಯಶಸ್ಸು ಪುಣ್ಯ ದೇವಾನುಗ್ರಹ ಎಲ್ಲವೂ ನಾಶವಾಗುತ್ತವೆ.

ಬ್ರಹ್ಮಚರ್ಯಂಚರೇದ್ಯಸ್ತು ವರ್ಷಾಣಾಂ ಪಂಚವಿಂಶತಿರ್ಯ।
ಗುಣವಾನ್ ಶಕ್ತಿ ಸಂಪನ್ನಃ ಸ ಶತಾಯುರ್ಭವಿಷ್ಯತಿ॥

೨೫ ವರ್ಷಗಳು ಬ್ರಹ್ಮಚರ್ಯೆಯನ್ನು ಪರಿಪಾಲನೆ ಮಾಡುವವನು ಶೀಲಸಂಪ
ನ್ನನೂ, ಶಕ್ತಿಯುತನೂ. ದೀರ್ಘಾಯುವೂ ಆಗುತ್ತಾನೆ. ಬ್ರಹ್ಮಚರ್ಯವೇ ಜೀವನ,
ವೀರ್ಯನಾಶವೇ ಮೃತ್ಯು, ಎಂದು ಸಾರಿರುವ ಆರ್ಯೋಕ್ತಿಗಳಿಂದ ಬ್ರಹ್ಮಚರ್ಯದ
ಮಹತ್ವವನ್ನರಿತು ಸಾಧನೆ ಮಾಡುವ ಸಾಧಕರ ಸಂಖ್ಯೆ ಬೆಳೆದಂತೆಲ್ಲಾ ಜನಾಂ
ಗವೂ ಸುಸಂಸ್ಕೃತವಾಗಿ ಉನ್ನತಿಯನ್ನು ಹೊಂದುತ್ತದೆ.

ದೌರ್ಭಾಗ್ಯವಶಾತ್ ನಮ್ಮೀ ಪುಣ್ಯಭೂಮಿಯನ್ನು ವಿದೇಶೀಯರಾಕ್ರಮಣ
ಮಾಡಿ ಆಳರಸರಾದ ನಂತರ ನಮ್ಮ ದೇಶೀಯರು ತೇಜೋಹೀನರಾಗಿ ನಿರ್ವೀರ್ಯ
ರಾಗಿ ತಮ್ಮತನವನ್ನು ತಾವು ಮರೆತು ವಿಶ್ವ ಕಲ್ಯಾಣಕ್ಕೆ ಸಾರ್ಥಕವಾದ ತಮ್ಮ ಅಪೂ
ರ್ವವಾದ ಸಂಪತ್ತುಗಳನ್ನೆಲ್ಲಾ ತ್ಯಾಜ್ಯಮಾಡುತ್ತಾ ಬಂದರು. ವಿದೇಶೀಯರ

## ನ ವ ನೀ ತ

**ಅಸಹಾಯಃ ಸಮರ್ಥೋಽಪಿ ತೇಜಸ್ವೀ ಕಿಂ ಕರಿಷ್ಯತಿ|**
**ನಿರ್ವಾತೇ ಜ್ವಲಿತೋ ವಹ್ನಿಃ ಸ್ವಯಮೇವ ಪ್ರಶಾಮ್ಯತಿ||**

—ಪಂಚತಂತ್ರ

ವ್ಯಕ್ತಿ ಸಮರ್ಥನಾಗಿದ್ದರೂ ಒಬ್ಬ ತೇಜಸ್ವಿಯಾದವನ ಸಹಾಯವಿಲ್ಲದಿದ್ದರೆ ಏನನ್ನು ತಾನೆ ಮಾಡಬಲ್ಲ? ಉರಿಯುವ ಬೆಂಕಿ ಗಾಳಿಯ ಸಹಾಯವಿಲ್ಲದಿದ್ದರೆ ತಾನಾಗಿಯೇ ಆರಿ ಹೋಗುತ್ತದೆ.

‡ ‡ ‡ ‡

**ಮಹತಾ ಪುಣ್ಯಯೋಗೇನ ಮಾನುಷಂ ಜನ್ಮ ಲಭ್ಯತೇ|**
**ತತ್ರಾಪ್ಯನಕೃತೋ ಧರ್ಮಃ ಕೀದೃಷಂ ಹಿ ಮಯಾಕೃತಮ್||**

—ಗರುಡ ಪುರಾಣ

ಮಹತ್ತರವಾದ ಪುಣ್ಯಯೋಗದಿಂದ ಮನುಷ್ಯ ಜನ್ಮ ಸಿಗುತ್ತದೆ. ಅದನ್ನು ಪಡೆದೂ ಸಹ ನಾನು ಧರ್ಮ ಕಾರ್ಯ ಮಾಡಲಿಲ್ಲ, ನಾನು ಮಾಡಿದ್ದೇನು-ಎಂದು ಜೀವಿಯು ಪಶ್ಚಾತ್ತಾಪ ಪಡುತ್ತಾನೆ.

‡ ‡ ‡ ‡

**ಜನ್ಮೇದಂ ವಂಧ್ಯತಾಂ ನೀತಂ ಭವಭೋಗೋಪಲಿಪ್ಸಯಾ||**
**ಕಾಚ ಮೂಲ್ಯೇನ ವಿಕ್ರೀತೋ ಹಂತ ಚಿಂತಾಮಣಿರ್ಮಯಾ||**

—ಶಾಂತಿಶತಕ

ಈ ಜನ್ಮವು ಸುಖ ಭೋಗಗಳ ಆಸಕ್ತಿಯಿಂದ ವ್ಯರ್ಥವಾಯಿತು. ಚಿಂತಾಮಣಿಯನ್ನು ಗಾಜಿನ ಬೆಲೆಗೆ ಮಾರಿದಂತಾಯಿತು.



## ಕ್ಷೇತ್ರವಾರ್ತೆ

—ಪಿ ಎನ್ ಚಂದ್ರಶೇಖರಯ್ಯ

ಸೆಪ್ಟಂಬರ್ ಐದರ ದಿನಾಂಕವನ್ನು ರಾಷ್ಟ್ರೀಯ ಶಿಕ್ಷಕ ದಿನವೆಂದೆ ಇಡೀ ರಾಷ್ಟ್ರ
ದಾದ್ಯಂತ ಆಚರಿಸಲಾಯಿತು. ಅಂದು ಶ್ರೀ ಕ್ಷೇತ್ರದಲ್ಲಿ ಲೋಕ ಶಿಕ್ಷಕರಲ್ಲೊಬ್ಬರಾದ
ಅಣ್ಣ ಬಸವಣ್ಣನವರ ಜಯಂತಿಯನ್ನು ಆಚರಿಸಲಾಯಿತು. ಪೂಜ್ಯ ಸನ್ನಿಧಿಯವರು
ಕಳೆದ ಮೂರು ನಾಲ್ಕು ವರ್ಷಗಳಿಂದಲೂ ಆಚರಿಸುತ್ತಾ ಬಂದಿರುವ ಗ್ರಾಮಾಂತರ
ಬಸವ ಜಯಂತಿಯ ಈ ವರ್ಷದ ಕಾರ್ಯಕ್ರಮದ ಮುಕ್ತಾಯ ಸಮಾರಂಭವನ್ನು
ಶ್ರೀ ಕ್ಷೇತ್ರದಲ್ಲಿಯೇ ನಡೆಸಿದರು. ಸಮಾರಂಭವು ಬೆಳಗಿನ 10 ಘಂಟೆಗೆ ಪ್ರಾರಂಭ
ವಾಯಿತು. ಪೂಜ್ಯರ ದಿವ್ಯ ನೇತೃತ್ವದಲ್ಲಿ ಜರುಗಿದ ಈ ಸಮಾರಂಭದಲ್ಲಿ ಪ್ರಾರಂ
ಭಿಕವಾಗಿ ಮಾತನಾಡಿದವರು, ರಾಣೀಬೆನ್ನೂರಿನ ಕಾಲೇಜಿನ ಉಪನ್ಯಾಸಕರಾದ
ಹಾಗೂ ಶಿವಾನುಭವಿಗಳಾದ ಶ್ರೀ ವಿ. ವಿ. ಸಂಗಮದರವರು. ಶ್ರೀಯುತರು ಅಣ್ಣ
ಬಸವಣ್ಣನವರು ಮತ್ತು ಶಿವಶರಣರು ಕಾಯಕಕ್ಕೆ ಕೊಟ್ಟ ಮಹತ್ವವನ್ನು ಕುರಿತು
ಹೃದಯ ಮುಟ್ಟುವಂತೆ ಉಪನ್ಯಾಸವಿತ್ತರು. ಶ್ರೀ ಸಾ. ಶಿ. ಮರುಳಯ್ಯನವರು,
ನುಲಿಯ ಚಂದಯ್ಯನವರ ವಿಷಯದಲ್ಲಿ ಸ್ವಾರಸ್ಯಪೂರ್ಣವಾಗಿ ಸಭೆಯ ಮುಂದಿಟ್ಟರು.
ಪೂಜ್ಯ ಶ್ರೀಗಳವರು ಆಶೀರ್ವದಿಸುತ್ತ "ಕಾಯಕ ಕೇವಲ ಉದರಪೋಷಣೆಯ ಮುಖ್ಯ
ಗುರಿಯಲ್ಲ. ಕಾಯಕದಿಂದ ಕಾಯಸ್ಥ ಆತ್ಮದ ವಿಕಾಸವಾಗಬೇಕು, ಕಾಯಕದಿಂದಲೆ
ಕೈಲಾಸ ಸೇರಬೇಕು" ಮುಂತಾಗಿ ಆಶೀರ್ವದಿಸಿದರು.

ಎರಡನೆಯ ಅಧಿವೇಶನ ಮಧ್ಯಾಹ್ನ ಮೂರು ಘಂಟೆಗೆ ಸಮಾವೇಶಗೊಂಡಿತ್ತು.
ಡಾ|| ಶ್ರೀ ಜಿ. ಎಸ್. ಶಿವರುದ್ರಪ್ಪನವರು ಮಾತನಾಡುತ್ತಾ ಶರಣರು ನಮಗೆ ಬಿಟ್ಟು
ಹೋದ ವಚನ ಸಾಹಿತ್ಯ. ಅದು ಜೀವಂತ ಸಾಹಿತ್ಯ. ಎಲ್ಲ ಕಾಲಕ್ಕೂ ಎಲ್ಲ ಜನಾಂಗ
ಕ್ಕೂ ಮತ್ತು ಎಲ್ಲರಿಗೂ ಜೀವನೋದ್ಧಾರದ ಮಾರ್ಗವನ್ನು ಸೂಚಿಸುವ ಅಮೂಲ್ಯ
ವಾದ ಜೀವನ ಮೌಲ್ಯಗಳನ್ನು ಒಳಗೊಂಡ ಸಾಹಿತ್ಯ. ಇದು ವಿಶ್ವನೂತನವಾದದ್ದು
ಎಂದರು. ಶ್ರೀ ಡಿ. ಜವರೇಗೌಡರು ಮಾತನಾಡುತ್ತಾ ಭಗವಾನ್ ಬಸವಣ್ಣನವರು
ವಿಶ್ವಮೌಲ್ಯಗಳನ್ನು ಒಳಗೊಂಡ ವಚನಗಳನ್ನು ಬಿಟ್ಟುಹೋದರು. ಜಗತ್ತಿನಲ್ಲಿರುವ
ಮನುಕುಲೋದ್ಧಾರಕ ಪುರುಷರಿಗೆಲ್ಲಾ ಹೋಲಿಸಿ, ಎಲ್ಲರನ್ನೂ ಮೀರಿನಿಂತ ಮಹಾನ್
ಕ್ರಾಂತಿಪುರುಷ ಮತ್ತು ಬಸವಣ್ಣ ಸಮಗ್ರ ಕ್ರಾಂತಿಯ ಮೂಲಪುರುಷನೆಂದು
ಕೊಂಡಾಡಿದರು. ಇಂತಹ ತಾತ್ವಿಕ ಹಾಗೂ ಮಹಾಮಾನವತಾವಾದಿ ಮತ್ತು
ದಲಿತೋದ್ಧಾರಕ ಪುರುಷನನ್ನು ಪಡೆದದ್ದು ನಮ್ಮ ಭಾರತೀಯರ ಭಾಗ್ಯ ಎಂದರು.
ಪೂಜ್ಯ ಸನ್ನಿಧಿಯವರು ಆಶೀರ್ವದಿಸುತ್ತಾ, ಬಸವಣ್ಣನವರು ಆರ್ತರ ಆಶಾಕಿರಣ,
ದೀನರ ದಯಾಳು, ಬಡವರ ಬಂಧು ಮುಂತಾಗಿ ಆಶೀರ್ವದಿಸಿದರು. ಸಮಾರಂಭಕ್ಕೆ

ಅಂಧಾನುಕರಣೆಯಿಂದ ಪರಂಪರಾಗತವಾಗಿ ಬಂದಿದ್ದ ತಮ್ಮ ಶ್ರೇಷ್ಠ ಗುಣಗಳನ್ನೆಲ್ಲಾ ಮರೆತರು. ಬ್ರಹ್ಮಚರ್ಯೆಯ ಮಹತ್ವವನ್ನರಿಯದೇ ಕೇವಲ ಭೋಗಲಾಲಸೆಯಿಂದ ಐಂದ್ರಯಿಕ ತೃಪ್ತಿಗಾಗಿ ಸಾಂಸಾರಿಕ ಜೀವನವನ್ನು ಬಳಸಲು ಅಭ್ಯಸಿಸಿದ ನಮ್ಮ ಜನರು ಊರ್ಧ್ವಮುಖವಾಗಿ ಪ್ರವಹಿಸುವ ವೀರ್ಯವೇ ಓಜೋರೂಪವಾಗಿ ಪರಿಣತವಾಗಿ ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧನವಾಗುವುದೆಂಬ ಕಲ್ಪನೆಯನ್ನೂ ಕೂಡ ಅರಿಯದೆ ಅಸಮರ್ಥರಾದರು. ಧರ್ಮಜೀವನದಲ್ಲಿ ಪರಿಸಮಾಪ್ತವಾಗಬೇಕೆನ್ನುವ ಉಚ್ಚ ಧ್ಯೇಯವನ್ನು ಮರೆತು ಕಾಲ್ಪನಿಕ ಸುಖಲಾಲಸೆಯ ಕೃತಕ ಜೀವನದಲ್ಲಿ ತಮ್ಮ ಸರ್ವಶಕ್ತಿಯನ್ನೂ ವಿನಿಯೋಗ ಮಾಡುತ್ತಾ ಮೃಗಜೀವನದ ಮಟ್ಟಕ್ಕೆ ಇಳಿದರು.

ಶಾಂತಿಯ ಸ್ವರೂಪವನ್ನರಿತು ಶಾಂತಿಸಾಧನೆಯನ್ನು ಮಾಡಿ ಶಾಂತಮೂರ್ತಿಗಳಾದ ಜಗತ್ತಿಗೆ ಶಾಂತಿ ಸಂದೇಶವನ್ನು ಬೀರಿ ಶಾಂತಿಸಾಮ್ರಾಜ್ಯವನ್ನು ಸ್ಥಾಪನೆ ಮಾಡಿದ ಆರ್ಯಋಷಿಗಳೂ, ಸಾಧುಗಳೂ, ಸಂತರೂ, ಶರಣರೂ ಅನುಭಾವಿಗಳ ಪೀಳಿಗೆಯುಳ್ಳವರಾಗಿರತಕ್ಕ ನಾವೇ ಇಂದು ಜಗತ್ತಿನಲ್ಲಿ ತಾಂಡವವಾಡುತ್ತಿರುವ ಅಶಾಂತಿ, ಅಸಮಾಧಾನ, ದ್ವೇಶಾಸೂಯೆಗಳು ಸ್ವಾರ್ಥಪರತೆಯಿಂದುಂಟಾಗಿರತಕ್ಕ ಸಂಕುಚಿತ ಮನೋಭಾವನೆಗಳನ್ನೆಲ್ಲವನ್ನೂ ಪರಿಹರಿಸಿ ವಿಶ್ವದಲ್ಲಿ ಶಾಂತಿ ಸಮತೆಗಳನ್ನುಂಟುಮಾಡುವ ಹೊಣೆಗಾರಿಕೆಯನ್ನು ಹೊರಬೇಕಾಗಿದೆ. ಈ ಉದಾರ ಧ್ಯೇಯ ಸಾಧನೆಗೆ ತಕ್ಕ ಅರ್ಹತೆಯುಂಟಾಗಬೇಕಾದರೆ ನಮ್ಮ ತರುಣ ತರುಣಿಯರು ವಿಚಾರಮತಿಗಳಾಗಿ ಸತ್ಸಂಕಲ್ಪ ಸದ್ಭಾವನೆಗಳಿಂದ ಪ್ರಚೋದಿತರಾಗಿ ಬ್ರಹ್ಮಚರ್ಯ ಸಾಧನೆಯಲ್ಲಿ ನಿರತರಾಗಿ ತಮ್ಮ ಜೀವನವನ್ನು ಉದಾತ್ತಗೊಳಿಸುವುದು ಅವಶ್ಯಕವಾಗಿದೆ.

ಕೇವಲ ಬಹಿರ್ಮುಖವಾಗಿರುವ ಇಂದ್ರಿಯ ಪ್ರವೃತ್ತಿಗಳನ್ನು ನಿಗ್ರಹಮಾಡಿ ಸ್ವಾಭಾವಿಕವಾಗಿ ಪರಸ್ಪರಾಕರ್ಷಿತರಾಗಿರುವ ಸ್ತ್ರೀ ಪುರುಷರು ತಮ್ಮನ್ನು ತಾವು ರಕ್ಷಣೆ ಮಾಡಿಕೊಳ್ಳುತ್ತಿರುವುದೇನು ಸಾಮಾನ್ಯವಾದ ಮಾತಲ್ಲ. ವಿಶ್ವಾಮಿತ್ರ ಪರಾಶರಾದಿ ದೀರ್ಘ ತಪಸ್ಸನ್ನು ಮಾಡಿ ತೇಜೋವಂತರಾಗಿದ್ದ ತಪಸ್ವಿಗಳು ಸಹ ವಂಚಿತರಾಗಿ ಇಂದ್ರಿಯಗಳಿಗೆ ಅಧೀನರಾಗಿ ಅನಂತರ ಮತ್ತೊಮ್ಮೆ ಕಠಿಣ ತಪಸ್ಸಿನಿಂದ ತಮ್ಮನ್ನುದ್ಧಾರಮಾಡಿಕೊಂಡಿರತಕ್ಕ ನಿದರ್ಶನಗಳಿರುವಾಗ ಸಾಮಾನ್ಯ ಮನುಷ್ಯರಿಗೆ ಈ ಮಾತು ಸುಲಭವಾದುದಲ್ಲ. ಆದರೆ ಯಾರೂ ಹತಾಶರಾಗಬೇಕಿಲ್ಲ, ಪರಿಶುದ್ಧವಾದ ಮನಸ್ಸು, ಉತ್ತಮ ಸನ್ನಿವೇಶ ಕಲ್ಪನೆ, ಪ್ರಖರವಾದ ಸಾಧನೆ ಇವುಗಳಿಂದ ಮನುಷ್ಯನು ಉದ್ಧಾರವಾಗುವುದು ಸತ್ಯವೆಂಬ ಭರವಸೆಯನ್ನು ಹೊಂದಿ ಸಾಧನೆಯನ್ನು ಮಾಡುವುದವಶ್ಯವು.

[ಶ್ರೀ ಶ್ರೀಗಳವರು ಸು. ವೆಂಕಟಾಚಲಯ್ಯ ಎಂಬುವರು ಬರೆದ 'ಯೌವನ ರಹಸ್ಯ' ಪುಸ್ತಕಕ್ಕೆ ಬರೆದ ಮುನ್ನುಡಿಯಿಂದ]



# ಜನಪದ ಸಾಹಿತ್ಯದಲ್ಲಿ ಸೃಜನಶೀಲತೆ

—ಡಾ|| ಎಲ್. ಆರ್. ಹೆಗಡೆ

ಜನಪದ ಸಾಹಿತ್ಯವು ಧಾರ್ಮಿಕ ಕ್ರಿಯಾಚರಣೆಯ ಸಂದರ್ಭದಲ್ಲಿಯೋ, ಕೆಲಸದ ಬೇಸರ ನೀಗುವುದಕ್ಕಾಗಿಯೋ ವ್ಯಕ್ತಿಗಳಿಂದ ರಚಿತವಾಗಿ, ಹಾಡುವಾಗಲೂ ಆಡುವಾಗಲೂ ಹೊಸ ಹೊಸದಾಗಿ ಸೃಷ್ಟಿಕಾರ್ಯ ನಡೆದು, ಕೆಲವು ಭಾಗ ಖಿಲವಾಗಿ, ಅಥವಾ ಸೇರಿ, ಸಮೂಹ ಮಾಧ್ಯಮವಾಗುತ್ತದೆ.

ಗಾದೆ, ಒಗಟು, ಕಥೆ, ಪುರಾಣಕಥೆ ಮತ್ತು ಹಾಡುಗಳ ವಿವಿಧ ರೂಪಗಳು ಒಂದೆಡೆಯಿಂದ ಇನ್ನೊಂದೆಡೆ, ಒಂದು ಕಾಲದಿಂದ ಮುಂದಿನ ಕಾಲಕ್ಕೆ ಪ್ರಸಾರ ಹೊಂದುವಾಗ, ಆಯಾ ಜನರ ಪರಿಸರ, ಅನುಭವ, ಭಾಷಾರೂಪ, ನೈಪುಣ್ಯ, ಅರಿವು, ಮರವೆಗಳ ಮೂಲಕ ಸೃಜನಶೀಲತೆಯ ಹೊಸ ಆಯಾಮಗಳನ್ನು ಪಡೆಯುತ್ತವೆ. ರಥದಮೇಲೆ ರಾಜಕುಮಾರನ ನೃತ್ಯದ ಮೇಜವಾನಿಗೆ ಹೋಗುವ ಸಿಂಡರೆಲ್ಲಾ ನಾರ್ವೆದೇಶದ ಪರಿಸರದಲ್ಲಿ ದೋಣಿಯ ಮೇಲೆ ಹೋಗಬಹುದು. ಇಲ್ಲಿಯೂ ಕಥೆಯ ಮೂಲಸೂತ್ರವಲ್ಲಿ ಹೆಚ್ಚು ವ್ಯತ್ಯಾಸವಿಲ್ಲದೆ, ಸಂಭಾಷಣೆಗಳಲ್ಲಿ ನವೀನ ಅಂಶಗಳು ಕಂಡುಬರಬಹುದು

ಬತ್ತಲೆಯಾಗಿರುವ ಸುಂದರಿಯ ಬಟ್ಟೆಗಳನ್ನು ಕದ್ದು ಮರವನ್ನೇರುವ ಕೃಷ್ಣನ ಚರ್ಯೆಯ ಮೊದಲಿನ ಅನಾಗರಿಕಜೀವನವು ನಾಗರೀಕತೆಗೆ ತಿರುಗುತ್ತಿದ್ದ ಸಂಕ್ರಮಣ ಕಾಲದ ಅವಶೇಷವಾಗಿದ್ದ ಕಥೆಯ ಸೂಚಕವಾಗಿದ್ದು, ಯೂರೋಪಿನ 'Swan Maiden' (ಹಂಸ ಕನ್ಯೆ) ಕಥೆಯ ರೂಪವನ್ನು ಪಡೆದಿದೆ.

ಕನ್ನಡದ ಉತ್ತರದೇವಿಯ ಹಾಡಿನ ಸುಖಾಂತ ಮತ್ತು ದುಃಖಾಂತವಾದ ಎರಡು ರೂಪಗಳಲ್ಲಿ ಸಹಾ ಹಿಂದಿನ ವಿವರಗಳು ಸಮಾನವಾಗಿವೆ. ವಿವರಣೆ ಬದಲಾದರೂ ಅವಳ ಅದೇ ಹೆಸರು ಕಂಡುಬಂದುದು ಮೂಲ ರಚನೆಯ ಗಾಢಪ್ರಭಾವವನ್ನು ತೋರಿಸುತ್ತದೆ.

ಸೃಜನಶೀಲತೆ ವ್ಯಕ್ತವಾಗುವ ಬಗೆಗಳಲ್ಲಿ ಚಿಕ್ಕಮಕ್ಕಳು ತಾವೇ ರಚಿಸುವ ಹಾಡುಗಳು ಸೇರುತ್ತವೆ. ಉದಾ: ಹೊಲದಗದ್ದೆಯ ಬಸ್‌ನಿಲ್ದಾಣದಲ್ಲಿ ಮೀನುಗಾರ ಹೆಂಗಸು ಮಕ್ಕಳೊಡನೆ ಬಂದಾಗ, ಎಳೆಂಟು ವರ್ಷದ ಅವಳ ಮಗಳು ಹೀಗೆ ಹೇಳಿದಳು.

ಅವ್ವಾ ಅವ್ವಾ, ಸಮುದ್ರದಗೆ ಹಾವ್ ಬಂದಿದೀ
ನಮ್ಮ ಮನೆ ಜಾನಕಿಗೆ ಜರ ಬಂದಿದೀ

ಕಳ್ಳರು ಕೊಂದರು. ಅವರು ಪರಸ್ಪರರಿಗೆ ಮೋಸಮಾಡಿ ಮರಣಪಟ್ಟರು. ಹಣಕ್ಕಾಗಿ ಹೆಣಗಳು ಉರುಳಿದ ಚಿತ್ರಣದ ಕೊನೆಗೆ ಬಂದ ಗುರು "ಹಣವೇ ಮನುಷ್ಯರನ್ನು ತಿನ್ನುವ ಹುಲಿ" ಎಂದು ಬೋಧಿಸಿದನು. ಕಥೆಯ ಸಹಜವಿಕಾಸದಲ್ಲಿ ಜಾಣ್ಮೆಯಿದೆ, ತಲೆಬರಹದ ಔಚಿತ್ಯ ಕೊನೆಗೆ ತಿಳಿಯುತ್ತದೆ.

"ಮುಂಗನ ಬಸಪ್ಪ" ಕಥೆಯಲ್ಲಿ ಒಳಸಿಹಿ, ಹೊರಸಿಹಿ ಮತ್ತು ಮನೆದುಂಬುವ ವಸ್ತು ಮುಂತಾಗಿ ಮಾತಾಡಿದ ಬಸಪ್ಪನು ಒಳಸಿಹಿ ಬಾಳೆಹಣ್ಣು, ಹೊರಸಿಹಿ ಖರ್ಜೂರ, ಮನೆದುಂಬುವ ವಸ್ತು ದೀಪ ಎಂದು ವಿವರಿಸಿ, ಜಿದ್ದನ್ನು ಗೆಲ್ಲುವುದು ಕಥೆಗಾರನ ಅಸಾಧಾರಣ ನೈಪುಣ್ಯಕ್ಕೆ ಒಂದೆರಡು ಸಾಕ್ಷಿ.

"ಹೆಣ್ಣು ಗಜನಿಂಬೆ ಹಣ್ಣು" ಕಥೆಯಲ್ಲಿ ಕನ್ನೆಯನ್ನು ಮೋಹಿಸಿದ ರಾಜಕುಮಾರನು ದಮುಸಗೌಡನಿಗೆ "ದಮುಸಗೌಡನ ಮನೆಯ ದಿಮುಸದಾಳಿಂಬೆ ಹಣ್ಣು" ಮುಂತಾಗಿ ಒಗಟುಹಾಕಿ, ಪೇಚಿಗೆ ಸಿಗಿಸಿದಾಗ, ಆ ಸೊಸೆ, "ಹಾಲವರ್ಣದ ಬಾವಿ, ನೀಲವರ್ಣದ ಪಕ್ಷಿ, ತಾ ಹೊಕ್ಕ ತಾ ಮೊಕವ ತೊಳೆಯಲಾರದ ಮೇಲೆ ನೀ ಎಂಥ ಹುಚ್ಚು ಡೊರೆಯೋ ?" ಎಂದು ಹೇಳಿ ಕಳಿಸುತ್ತಾಳೆ, ತಾನು ಹಾಲವರ್ಣದ ಬಾವಿ, ಆತ ನೀಲವರ್ಣದ ಪಕ್ಷಿ ಬೇರೆ ತಂತ್ರ ಪ್ರತಿತಂತ್ರಗಳಲ್ಲೂ ಕಥೆಗಾರನ ಪ್ರೌಢಿಮೆ ಹಾಸು ಹೊಕ್ಕಾಗಿದೆ.

ಅತಿಮಾನುಷ ಕಥೆಗಳಲ್ಲಿನ ಮಾಂತ್ರಿಕ ವಸ್ತುಗಳ ಉಪಯೋಗದಲ್ಲಿನ ಜಾಣ್ಮೆಯ ಸಂದರ್ಭಗಳಲ್ಲಿಯೂ ಕಲ್ಪನಾ ಚಮತ್ಕಾರವು ಹೆಚ್ಚು ಹೃದಯಂಗಮವಾಗುತ್ತದೆ. ಹಾರುವ ಜಮಖಾನ, ಅಕ್ಷಯ ಚೀಲ, ಅದೃಶ್ಯ ಶಕ್ತಿಯ ಟೊಪ್ಪಿಗೆ, ಕಥೆಯಲ್ಲಿ ಮೋಸಮಾಡಿ ಅವನ್ನಪಹರಿಸಿದ ರಾಜಕುಮಾರಿಗೆ ಮಾಟದ ಬಾಳೆಹಣ್ಣು ತಿನ್ನಿಸಿ, ಅಷ್ಟೇ ಕೋಡು ಮೂಡಿಸಿ, ಅವನ್ನೂ ಅವಳನ್ನೂ ಪುನಃ ವಶಪಡಿಸಿಕೊಂಡ ರಾಜ ಕುಮಾರನ ಹಂಚಿಕೆ ಹಾಸ್ಯ ಸನ್ನಿವೇಶವನ್ನು ತಂದ, ಕಥೆಯ ಮೇಲ್ಮಟ್ಟಕ್ಕೆ ಸಹಾಯಕ ವಾಗಿದೆ. ಆದರೆ ಮಂತ್ರಿಸಿದ ಕಲ್ಲುಹರಳುಗಳಿಂದಲೇ ಕಾರ್ಯ ಸಾಧನೆಯಾಗುವ ಕಥೆಯಲ್ಲಿ ಕಲ್ಪನಾ ದಾರಿದ್ರ್ಯವೇ ಕಾಣುತ್ತದೆ.

ಒಬ್ಬರದೇ ಅನುಭವ ಇತರರ ಅನುಭವದ ಒರೆಗಲ್ಲಾಗುವ ಗಾದೆ ಸೂತ್ರರೂಪ ವಾಗಿಯೂ ಪ್ರಾಸಬದ್ಧವಾಗಿಯೂ ಜನಪ್ರಿಯವಾಗುತ್ತದೆ. ಉದಾ :

ಓಂ ನಮಃ ಶಿವಾಯ ; ಕಂಡೋರ ಗಂಟೆಗಪಾಯ
ಸೆಟ್ಟಿ ಹುಡ್ಗಿ ಕಂಡು ಜಟ್ಟಿ ಜಾರ್ಬಿದ್ದ

ಎಂಬ ಗಾದೆ ನಡೆದ ಘಟನೆಯನ್ನೇ ಆಧರಿಸಿ ಕಥೆಗಾದೆಯಾದಂತಿದೆ. ಜಟ್ಟಿಯು ಗಟ್ಟನೆಲದಲ್ಲಿ ಜಾರಿಬೀಳಲು ನಿಮಿತ್ತಳಾದವಳು ಸೆಟ್ಟಿಯ ಅರ್ಥಾತ್ ಶ್ರೀಮಂತ ವ್ಯಾಪಾರಿಯ ಮಗಳಾಗಿದ್ದರೆ, ಇದ್ದಕ್ಕೆ ಅವಳ ರೂಪದೊಡನೆ ವೇಷಭೂಷಣಗಳೂ,



ಸಹಾಯಕ, ಆಮಿಷಗಳಿಗೆ ಬಲಿಯಾಗುವವರ ಪರಿಸ್ಥಿತಿಯನ್ನು ಹೇಳುವಾಗ ಇಲ್ಲಿ ಪ್ರಾಸವೂ ಹಾಸ್ಯಕ್ಕೆ ಪೋಷಕವಾಗಿ ಗಮನಾರ್ಹ ಪ್ರತಿಭೆಗೆ ಸೂಚಕವಾಗಿದೆ.

ಒಗಟುಗಳಲ್ಲಿ ಅರ್ಥಗರ್ಭಿತ ಪದರಚನೆಯೂ ಕಾವ್ಯದ ಸೊಬಗೂ ಜೀವನ ಸೌಂದರ್ಯವೂ ಕಂಡುಬಂದು, ರಚಕರ ಕೌಶಲ್ಯವನ್ನು ತೋರಿಸುತ್ತವೆ.

ಅಂಬರದಲ್ಲಿ ಆಡೂ ಪೋರಾ
ತುಂಬರದಲ್ಲಿ ತೂಗೊ ಪೋರಾ
ಉಂಬೂಕೆ ಬಾರೋ ಮಿಡಿಪೋರಾ

ಎಂಬ ಚಿಕ್ಕಬಾಲನ ಮುದ್ದು ಚರ್ಯೆಗಳ ಚಿತ್ರಣವು ಸುಂದರವಾಗಿಯೇ ಇದೆ. ಆದರೆ ಅಂಬರದಲ್ಲಿ ಆಡಲು ಉಯ್ಯಾಲೆ ತೂಗುವ ಈ ಮಿಡಿಪೋರನನ್ನು ಉಣ್ಣಲು ಕರೆದವರು ಯಾರು ? ವಾತ್ಸಲ್ಯದ ತಾಯಿಯಲ್ಲ. ಮಾವಿನ ಮಿಡಿಗಳು ತುಂಬಿದ ಮರದ ಕೆಳಗೆ ನಿಂತು, ಮೇಲೆ ಗೊಂಚಲಿನಲ್ಲಿ ಗಾಳಿಗೆ ತೂಗಾಡುವ ಮಿಡಿಯನ್ನು ಬರಲು ಕರೆವವರು ಅವುಗಳಂತೆಯೇ ಮಿಡಿಪೋರರು, ತಾವು ತಿನ್ನಲು ಕೆಳಗೆ ಬಾ ಎಂದು ಕರೆವವರು ಎಂದು ತಿಳಿದಾಗ ಈ ಪ್ರಾಸಳಗ ಹಾಗೂ ಛಂದಸ್ಸಿನ ಉಯ್ಯಾಲೆಯಲ್ಲಿ ತೂಗಾಡುವ ಸಾಲುಗಳು. ಮಾವಿನ ಮಿಡಿಯ ಒಗಟೇ ಎಂದು ಕಂಡುಬಂದು, ಹೆಚ್ಚಿನ ಆನಂದ ಹಾಗೂ ಅಚ್ಚರಿಯನ್ನು ಉಂಟುಮಾಡುವದು.

ಬಹಳ ಸಂಕೀರ್ಣವಾದ ಜೀವನದ ವಿಷಯವನ್ನು ಒಂದು ವಿಶಿಷ್ಟ ಉದೇಶಕ್ಕೆ ಅನುಗುಣವಾಗಿ, ಸುಸಂಬದ್ಧವಾಗಿ, ರಸವತ್ತಾಗಿ ಮೂಡಿಸಲು ಪ್ರಯತ್ನಿಸುವುದಕ್ಕೆ ಬೇಡವಾದುದನ್ನು ಬಿಟ್ಟು, ಬೇಕಾದುದನ್ನು ಆಯ್ಕೆ ಮಾಡಿಕೊಂಡು, ಅಗತ್ಯಕ್ಕೆ ತಕ್ಕಂತೆ, ತನ್ನ ಅನುಭವ ಹಾಗೂ ಕಲ್ಪನಾಶಕ್ತಿಯ ಸಹಾಯದಿಂದ ಹೊಸದಾಗಿ ಸೇರಿಸಿ, ಪುನಃ ಸೃಷ್ಟಿಸುವಾಗ ಸೃಷ್ಟಿಯಲ್ಲಿ ಕಾಣದ ಹೊಸ ಸೌಂದರ್ಯ ಮತ್ತು ಸ್ವಾರಸ್ಯ ಮೂಡುವಂತೆ ಮಾಡುವ ಮೋಡಿಯೇ ಸೃಜನಶೀಲತೆ.

ಇದು ಬುದ್ಧಿಶಕ್ತಿಯನ್ನು ಅವಲಂಬಿಸಿದ್ದರೂ ಲೋಕಾನುಭವದಿಂದ ಪ್ರೇರಿತ ವಾದ ಸ್ಫೂರ್ತಿಯೇ ಇದರ ಮೂಲಸೂತ್ರದ ನೆಲೆ. ಸ್ಫೂರ್ತಿ ಜಾಗ್ರತವಾದಾಗ, ಕಲಿಯದವನಿಂದಲೂ ಕಲಾಕೃತಿ ಮೂಡಲು ಸಾಧ್ಯ. ಜೀವನದ ಸುಖ-ದುಃಖ, ಅಂದ-ಕುಂದು, ಪ್ರೀತಿ-ದ್ವೇಷ, ಅಚ್ಚರಿಯ ಭಾವಗಳಲ್ಲಿ ಓಲಾಡಿ, ತಾನು ಪಡೆದ ಆನಂದವನ್ನು ಇತರರೂ ಪಡೆಯುವಂತೆ ರಚನೆಯಲ್ಲಿ ಔಚಿತ್ಯದಿಂದೊಡಗೂಡಿದ ಸಾಮಂಜಸ್ಯವನ್ನು ಕಲ್ಪಿಸಿ, ಜನಪದ ಕವಿ ಸಹ ಕೃತಿನಿರ್ಮಾಣಗೆಯ್ಯುತ್ತಾನೆ. ಈ ಕೃತಿ ಆಕೃತಿಯಲ್ಲಿ ಪ್ರಕೃತಿಯ ಪ್ರತಿಕೃತಿಯಾಗಿ ಎಂದೂ ಕಾಣಬರುವುದಿಲ್ಲ. ಸ್ವಚ್ಛಂದ ಸುಂದರವಾದರೂ ಲೋಕದಲ್ಲಿ ಕಾಣದ ಹೊಸ ಬಂಧುರತೆ, ನಯಗಾರಿಕೆ ಇಲ್ಲಿ ಕಾಣು ತ್ತದೆ. ಹಿಂದಿನದನ್ನು ಅನುಕರಿಸುವಲ್ಲಿಯೂ ನಾವೀನ್ಯವುಳ್ಳ ಲಾವಣ್ಯ ಕಾಂತಿಯಿರು ವುದೇ ಸೃಜನಶೀಲತೆಯ ಹೆಗ್ಗುರುತು.

# ಡಾ|| ಮಾಸ್ತಿ ವೆಂಕಟೇಶಯ್ಯಂಗಾರ್

—ಡಾ|| ಕೆ. ನಾಗೇಶ ಹಕ್ಲಾರ

ಹೊಸಗನ್ನಡ ಸಾಹಿತ್ಯವು 20ನೇ ಶತಮಾನದಲ್ಲಿ ತುಂಬು ಪ್ರವಾಹದೊಂದಿಗೆ
ಹರಿಯಲು ಪ್ರಾರಂಭಿಸಿದ ಹೊಸದರಲ್ಲಿಯೇ ಸಣ್ಣ ಕತೆಯ ಪ್ರಾಕಾರವೂ ಸೃಷ್ಟಿ
ಯಾಯಿತು. ಕಾದಂಬರಿಗಿಂತಲೂ ಗಾತ್ರದಲ್ಲಿ ಚಿಕ್ಕದಾದ ಕಥನ ಕಲೆಯಲ್ಲಿ ಪ್ರಬಂಧ
ಕ್ಕಿಂತ ಬೇರೆಯಾದ ಸಣ್ಣಕತೆ ಸೃಷ್ಟಿಯಾದಂದಿನಿಂದ ಇಂದಿನವರೆಗೂ ತನ್ನದೇ ಆದ
ವಿಶಿಷ್ಟತೆಯನ್ನು ಕಾಯ್ದುಕೊಂಡು ಬಂದಿದೆ. ಕಾದಂಬರಿಗಿಂತಲೂ ವಿಪುಲವಾಗಿ
ವೈವಿಧ್ಯಯುತವಾಗಿ ಬೆಳೆದಿದೆ. ಪಾಶ್ಚಾತ್ಯರ ಸಾಹಿತ್ಯದ ಪ್ರಭಾವಕ್ಕೆ ಸಿಲುಕಿ ಇತ್ತೀ
ಚೆಗೆ ಅತಿ ರೋಚಕವೂ, ಕುತೂಹಲಕಾರಿಯೂ, ಗಮನಾರ್ಹವೂ ಆದ ಸಾಹಿತ್ಯ
ಪ್ರಕಾರವೆನ್ನಿಸಿದೆ.

ಪಂಜೆಮಂಗೇಶರಾಯರು, ಕೆರೂರುವಾಸುದೇವಾಚಾರ್ಯರಿಂದ ಉಗಮ
ಹೊಂದಿದ ಸಣ್ಣಕತೆ ಶ್ರೀನಿವಾಸ ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದ ಮಾಸ್ತಿ ವೆಂಕ
ಟೇಶಯ್ಯಂಗಾರರಲ್ಲಿ ಮುಗಿಲುಮುಟ್ಟಿತು. ಪಳಗಿದ ಸಣ್ಣ ಕತೆಗಾರರಲ್ಲಿ ಮಾಸ್ತಿಯವರು
ಮೊದಲಿಗರು ಮತ್ತು ಅಗ್ರಗಣ್ಯರು. "ಮಾಸ್ತಿ ಕನ್ನಡದ ಆಸ್ತಿ" ಎಂಬ ಮಾತು ಸಣ್ಣ
ಕತೆಗಳ ಪ್ರಾರಂಭ ಕಾಲದಲ್ಲಿ ಎಷ್ಟರಮಟ್ಟಿಗೆ ನಿಜವಾಗಿತ್ತೋ, ಅದು ತನ್ನ ಶಿಖರವನ್ನು
ಮುಟ್ಟಿರುವ ಸ್ಥಿತಿಯಲ್ಲಿಯೂ ಅಷ್ಟೇ ಮಟ್ಟಿಗೆ ನಿಜವಾಗಿದೆ. ತುಂಬು ಜೀವನವನ್ನು
ಬಾಳಿ ತಮ್ಮ ತೊಂಬತ್ತನೆಯ ವರ್ಷವನ್ನು ದಾಟಿದ ಮಾಸ್ತಿಯವರು ತಮ್ಮ ತುಂಬು
ಜೀವನದ ಅನುಭವವನ್ನು ಅನೇಕ ಸಣ್ಣ ಕತೆಗಳಲ್ಲೂ ಹರಡಿದ್ದಾರೆ. ಪ್ರತಿಯೊಂದು
ಕತೆಯೂ ಒಂದಲ್ಲ ಒಂದು ವಿಧದಲ್ಲಿ ಅವರ ಜೀವನ ದರ್ಶನವೇ ಆಗಿದೆ. ಬೇರೆ ಬೇರೆ
ಯಾದ ಸಂಗ್ರಹಗಳಲ್ಲಿ ಅವರ ಸುಮಾರು ನೂರಕ್ಕೂ ಹೆಚ್ಚು ಕತೆಗಳು ಪ್ರಕಟವಾಗಿವೆ.
'ನವರಾತ್ರಿ' ಎಂಬ ಸಂಗ್ರಹದಲ್ಲಿ ಪದ್ಯರೂಪದ 12 ಕಥೆಗಳು ಪ್ರಕಟವಾಗಿವೆ. ಬರ
ವಣಿಗೆಯ ಸಮೃದ್ಧಿ ಮತ್ತು ಸಲಿಲತೆ, ಜನಜೀವನದಲ್ಲಿ ನಿತಾಂತ ಆಸಕ್ತಿ, ಜಾನಪದ
ಕತೆಗಳ ಬಗ್ಗೆ ತೀವ್ರವಾದ ಕುತೂಹಲ, ಕನ್ನಡ ಸಂಸ್ಕೃತಿಯ ವಿಷಯದಲ್ಲಿ ವಿಶೇಷ
ಆದರ, ಈ ಮುಂತಾದ ಗುಣಗಳು ಅವರ ಸಣ್ಣ ಕತೆಗಳಿಗೆ ಸರ್ವಸಾಮಾನ್ಯವಾದ
ಮನೋಭೂಮಿಕೆಯನ್ನು ಒದಗಿಸಿವೆ. ಭಾರತೀಯ ಸಾಹಿತ್ಯ ಮತ್ತು ಸಂಸ್ಕೃತಿಗಳ,
ಅಷ್ಟೇ ಏಕೆ ? ಜಾಗತಿಕ ಸಾಹಿತ್ಯ ಮತ್ತು ಸಂಸ್ಕೃತಿಗಳ ಅಭ್ಯಾಸ ಮತ್ತು ಮನನ
ದಿಂದ ಅವರ ದೃಷ್ಟಿ ವ್ಯಾಪಕವಾಗಿದೆ. ಸಾಮಾನ್ಯವಾಗಿ ತಂತ್ರದ ಅಭಾವವೇ ಅವರ
ತಂತ್ರವಾಗಿದೆ. ಅತ್ಯಂತ ಸರಳವಾದ ಸಲಿಗೆಯ ಸರಣಿ ಅವರ ಕತೆಗಳ ಜೀವಾಳವೆನ್ನ



ಬಹುದು. ರಚನೆಯ ದೃಷ್ಟಿಯಿಂದ ನೋಡುವಾಗ ಬೆರಗುಗೊಳಿಸುವ ಶೈಲಿ ಅವರಲ್ಲಿ
ಕಾಣುವುದಿಲ್ಲ. ಆದರೆ ಮನುಷ್ಯ ಜೀವನದ, ಮನುಷ್ಯ ಸ್ವಭಾವದ ಮತ್ತು ಸಂಸ್ಕೃತಿ
ಯ ಯಥಾವತ್ತಾದ, ಸೂಕ್ಷ್ಮವಾದ ನಿರೂಪಣೆಯಲ್ಲಿ ಅವರು ಪಡೆದ ಸಿದ್ಧಿ ಹೆಮ್ಮೆಯ
ಸಂಗತಿ. ಅವರ ಸಾತ್ವಿಕ ಜೀವನ ದರ್ಶನದಿಂದಲೂ, ಸಹಜ ಮತ್ತು ಸರಳವಾದ ಕಥನ
ಶಕ್ತಿಯಿಂದರೂ ಅವರ ಕಥೆಗಳಿಗೆ ಒಂದು ವಿಶಿಷ್ಟ ರುಚಿ ಬಂದಿದೆ, ತೂಕ ಬಂದಿದೆ.
ಅವರ ಕಥೆಗಳಲ್ಲಿ ಅತ್ಯಂತ ಪ್ರಸಿದ್ಧವಾದುದೂ, ಉದಾತ್ತವಾದುದೂ ಎಂದರೆ ಒಬ್ಬ
ಸಂಗೀತಗಾರನ ಸಮಗ್ರ ಜೀವನದರ್ಶನವನ್ನು ಅಡಕದಲ್ಲಿ ಅರಳಿಸಿರುವ "ಸುಬ್ಬಣ್ಣ"
ಎಂಬ ಕಥೆ. ಸಾಮಾನ್ಯವಾದ ಸಣ್ಣ ಕಥೆಗಿಂತ ಗಾತ್ರದಲ್ಲಿ ದೊಡ್ಡದಾದರೂ ಅಂತಸ್ಸ
ತ್ವದಲ್ಲಿ ಇದು ಕನ್ನಡದ ಹಿರಿಗತೆಗಳಲ್ಲಿ ಒಂದು. "ಹೇಮಕೂಟದಿಂದ ಬಂದಮೇಲೆ"
ಅವರ ಕಲ್ಪಕತೆಗೆ ಹಿರಿದಾದ ಸಾಕ್ಷಿಯಾಗಿದೆ.

ಕಾಳಿದಾಸನ ನಾಟಕ ಮುಗಿದ ಸಂದರ್ಭದಿಂದ ಪ್ರಾರಂಭವಾಗಿ ಶಕುಂತಲೆಯ,
ಮನೋವೇದಕ ದುಃಖವನ್ನು ವಿವರಿಸಿ ಹೇಳುವ ಈ ಕತೆ ಶಕುಂತಲೆಯ ಜೀವನ ದರ್ಶ
ನದ ಮೂಲಕ ಮಾಸ್ತಿಯವರ ಜೀವನ ದರ್ಶನವನ್ನೇ ನೀಡುತ್ತದೆ, "ಆಚಾರ್ಯರ
ಹೆಂಡತಿ" ರಾಮಾನುಜಾಚಾರ್ಯರ ಜೀವನ ಚರಿತ್ರೆಯ ಮೇಲೆ ಹೊಸ ಬೆಳಕನ್ನು
ಚೆಲ್ಲುತ್ತದೆ. ಆಚಾರ್ಯರು ತಮ್ಮ ಹೆಂಡತಿ ಮಾಡಿದ ಸಣ್ಣತಪ್ಪಿಗಾಗಿ ಆಕೆಯನ್ನು
ತ್ಯಜಿಸಿ ಧರ್ಮವನ್ನು ಉದ್ಧರಿಸಿದರು ಎಂದು ಅವರನ್ನು ಹೊಗಳುವ ಲೋಕ ಆ ಹೆಂಡ
ತಿಯ ಗತಿಯೇನು ? ಎಂದು ಒಮ್ಮೆಯೂ ಯೋಚಿಸುವುದಿಲ್ಲ. ಆಕೆಯ ದುಃಸ್ಥಿತಿಯ
ಬಗ್ಗೆ ಪರಿತಪಿಸಿದ ಮಾಸ್ತಿಯವರು ತಮ್ಮ ಕಲ್ಪನೆಯಲ್ಲೇ ಒಂದು ಕಥೆಯನ್ನು ಹುಟ್ಟಿ
ಆಕೆಯ ಪಾಪಕ್ಕೆ ಪ್ರಾಯಶ್ಚಿತ್ತವನ್ನೊದಗಿಸುವ ಮೂಲಕ ಪುನೀತಳನ್ನಾಗಿಸಿದ್ದಾರೆ.

'ಕವಿಯ ಬಾಳ ಕೊನೆಯ ದಿನ' ಜರ್ಮನೀ ಕವಿ ಗಯಟೆಯ ಅಂತಿಮ ದಿನ
ಗಳನ್ನು ಚಿತ್ರಿಸುತ್ತದೆ. ಕವಿಯು ಮೃತ್ಯುಶಯ್ಯೆಯಲ್ಲಿ ನೀಡುವ ಜೀವನ ಸಿದ್ಧಾಂತ
ವನ್ನು ನಿರೂಪಿಸುವಲ್ಲಿ ಮಾಸ್ತಿಯವರ ಸಿದ್ಧಹಸ್ತವನ್ನು ಕಾಣಬಹುದು. ಪಾಶ್ಚಾತ್ಯ
ಜನಜೀವನದ ಸಮಗ್ರ ಪರಿಚಯವನ್ನು ಮಾಸ್ತಿಯವರು ಪಡೆದಿರುವರೆಂಬುದಕ್ಕೆ ಈ
ಕತೆ ಸಾಕ್ಷಿಯೊದಗಿಸುತ್ತದೆ. "ಡೂಬಾಯಿ ಪಾದ್ರಿಯ ಪತ್ರ" ಅವರ ದೇಶಪ್ರೇಮ
ವನ್ನು ಎತ್ತಿಹಿಡಿಯುತ್ತದೆ. "ಮೊಸರಿನ ಮಂಗಮ್ಮ" ಎಂಬುದು ಅತಿ ಸರಳವಾದ ಕತೆ.
ಅನಾದಿಕಾಲದಿಂದ ನಡೆದುಬಂದಿರುವ ಅತ್ತೆ–ಸೊಸೆಯರ ಜಗಳವನ್ನೂ ಮೇಲಾಟ
ವನ್ನೂ ಹಾಸ್ಯದ ಕಣ್ಣುಗಳಿಂದ ನೋಡುವ ಕತೆಗಾರರು ಸಾಮಾನ್ಯ ಜನಜೀವನದ
ಬಗೆಗೂ ತಮಗಿರುವ ಬಲವನ್ನೂ ಆಸಕ್ತಿಯನ್ನೂ ತೋರ್ಪಡಿಸಿಕೊಂಡಿದ್ದಾರೆ. 'ಉಗ್ರ
ಪ್ಪನ ಉಗಾದಿ' 'ರಂಗಪ್ಪನ ದೀಪಾವಳಿ' ಈ ಕಥೆಗಳಲ್ಲಿ ತೂಕದ ವಸ್ತುವಿಲ್ಲ. ಗಾಂಭೀ
ರ್ಯವೂ ಇಲ್ಲ, ಆದರೂ ಕತೆ ಹೇಳುವ ಕಲೆಗಾರಿಕೆ, ಓದಿಸಿಕೊಂಡು ಹೋಗುವ ಶೈಲಿ
ಇಲ್ಲಿ ಎದ್ದು ಕಾಣುತ್ತವೆ.

ಸಣ್ಣ ಕತೆಯ ಪ್ರಕಾರ ಈಗ ತೆಗೆದುಕೊಂಡಿರುವ ತಿರುವನ್ನು ಗಮನಿಸಿದಾಗ, ಇತ್ತೀಚಿನ ದಿನಗಳಲ್ಲಿ ಸಣ್ಣ ಕತೆಗಳು ಅತಿ ಹೆಚ್ಚು ಸಂಖ್ಯೆಯಲ್ಲಿ ಬರುತ್ತಿವೆ. ವಿದ್ಯಾವಂತರೂ, ಪಾಶ್ಚಾತ್ಯ ಸಾಹಿತ್ಯದ ಪ್ರಭಾವಕ್ಕೆ ಸಿಲುಕಿದವರೂ, ಯುವಕ ಯುವತಿಯರೂ, ಹೆಚ್ಚಿನ ಸಂಖ್ಯೆಯಲ್ಲಿ ಸಣ್ಣ ಕತೆಗಳನ್ನು ರಚಿಸಿದ್ದಾರೆ. ಈ ಕತೆಗಳಲ್ಲಿ ತಂತ್ರವೇ ಪ್ರಧಾನವಾಗಿರುತ್ತವೆ. ಕಥೆಯ ಶೈಲಿಯೂ, ವಸ್ತುವೂ ನಿರೂಪಣಾ ರೀತಿಯೂ ತೊಡಕಾಗಿರುವುದೇ, ಜಟಿಲವಾಗಿರುವುದೇ ಕಥೆಯ ಶ್ರೇಷ್ಠತೆಗೆ ಒರೆಗಲ್ಲು ಎಂಬ ಭಾವನೆ ಬಂದಿದೆ. ಇಂತಹ ಸಣ್ಣ ಕಥೆಗಳ ಪ್ರವಾಹದ ನಡುವೆಯೂ, ಯಾವ ತಂತ್ರಕ್ಕೂ ಮೊರೆ ಹೋಗದ, ಸರಳವಾದ ಶೈಲಿಯೇ ತಮ್ಮ ಬಂಡವಾಳವಾದ ಮಾಸ್ತಿಯವರು ನಡುಗಡ್ಡೆಯಾಗಿ ಉಳಿಯುತ್ತಾರೆ ಎಂಬ ಅಂಶದಲ್ಲಿಯೇ ಮಾಸ್ತಿಯವರ ಹಿರಿಮೆ ಅಡಗಿದೆ.

## ಜಾನಪದ ಮಕ್ಕಳ ಹಾಡುಗಳು

ಬೆಲ್ಲದಂಗಡಿ ಮಲ್ಲಪ್ಪ, ಒಳ್ಳೆಬೆಲ್ಲ ಎಲ್ಲಪ್ಪ,
ಎರಡು ಕೇಜಿ ತೂಗಪ್ಪ, ಧಾರಣೆ ತೇಜಿ ಏನಪ್ಪ,
ಪೈಸೆ ಈಗ ಇಲ್ಲಪ್ಪ, ಲೆಕ್ಕದಲ್ಲಿ ಇರಲಪ್ಪ.

ಕಲ್ಲು ಕಲ್ಲಿನ ಆಟ
ಮೂಲಂಗಿ ತೋಟ
ತಂಬ್ರಳ್ಳಿ ಸಾಹ್ಕಾರದು ಬಲುಕಾಟ.

ಕಿಲಾಡಿ ಕಿಟ್ಟ
ಬಲಗೈಸೊಟ್ಟ
ಶಾಲೆ ಬಿಟ್ಟ
ಚಕ್ಕರ್ ಕೊಟ್ಟ
ಯಾರಿಗೇನ್ ನಷ್ಟ ?

ಬಾರೋ ಬಾರೋ ಗುಬ್ಬಚ್ಚಿ
ಕಾಳನು ಹಾಕುವೆ ಪಾಪಚ್ಚಿ
ಕಾಳನು ಕಚ್ಚಿ
ರೆಕ್ಕೆಯ ಬಿಚ್ಚಿ
ಪುರ್ರನೆ ಹಾರುವ ಗುಬ್ಬಚ್ಚಿ.

ಸಂಗ್ರಹ : ಕೆ. ವಿರುಪಾಕ್ಷಗೌಡ



# ಇಂಟರ್ವ್ಯೂದಲ್ಲಿ ಸಫಲತೆ ಎಂತು ?

—ಬಿ. ಸುಬ್ರಾಯ ಅಡಿಗ

ನೌಕರಿಗಳ ಬಗ್ಗೆ ಜನಸಾಮಾನ್ಯರಲ್ಲಿರುವ ಭಾವನೆಯೆಂದರೆ ಖಾಲಿ ಜಾಗಗಳನ್ನು ತುಂಬುವ ವೇಳೆ ನಡೆಸಲಾಗುವ ಲಿಖಿತ ಪರೀಕ್ಷೆಗಳಲ್ಲಿ ಸಾಕಷ್ಟು ಪ್ರಾಮಾಣಿಕತೆಯಿದ್ದರೂ ಇಂಟರ್ವ್ಯೂ ವೇಳೆ ವಸೂಲಿಯಿರುವ ಅಭ್ಯರ್ಥಿಗಳನ್ನೇ ಆರಿಸುತ್ತಾರೆ- ಎಂಬುದು. ಈ ಆರೋಪ ಕೆಲಮಟ್ಟಿಗೆ ನಿಜವಾದರೂ ಇಂಟರ್ವ್ಯೂದಲ್ಲಿ ಹೆಚ್ಚಿನ ಅಭ್ಯರ್ಥಿಗಳು ವಿಫಲರಾಗುತ್ತಾರೆಂಬುದೂ ಸತ್ಯವೇ.

ಇದಕ್ಕೇನು ಕಾರಣವೇನೆಂದು ಎಂದಾದರೂ ನೀವು ಯೋಚಿಸಿದ್ದುಂಟೆ ?

ಹೆಚ್ಚಿನ ಸಂಸ್ಥೆಗಳಲ್ಲಿ ಇಂಟರ್ವ್ಯೂ ಪಡೆಯುವಾಗ ೯೦%ರಷ್ಟು ಪ್ರಮಾಣಿಕತೆಯಿಂದಲೇ ವರ್ತಿಸಲಾಗುತ್ತದೆ. ಹೀಗಾಗಿ ನಿಮಗೆ ನೌಕರಿ ದೊರೆಯದಿರಲು ಅವುಗಳ ಪಕ್ಷಪಾತ ಕಾರಣವೆಂದು ಹೇಳುವುದರಲ್ಲಿ ಹುರುಳಿಲ್ಲ.

ಪ್ರತಿಯೊಬ್ಬನೂ ತನ್ನ ಕೆಲ ನಿಶ್ಚಿತ ಧೋರಣೆಗಳನ್ನನುಸರಿಸುತ್ತಾನೆ. ಅವನು ತನ್ನ ಸಿದ್ಧಾಂತಕ್ಕೆ ಅನುಗುಣವಾಗಿಯೇ ಯೋಚಿಸುತ್ತಾನೆ. ತನ್ನ ವಿಚಾರಕ್ಕೆ ವಿರುದ್ಧವಾದುದನ್ನು ಆತ ಖಂಡಿತ ಮೆಚ್ಚುವುದಿಲ್ಲ.

ಇಂಟರ್ವ್ಯೂಗಳಲ್ಲೂ ಹೆಚ್ಚಿನ ಸೆನ್ಸರ್ ನಡೆಯುತ್ತದೆ. ಪ್ರತಿಯೊಬ್ಬ ಪ್ರಶ್ನಕರ್ತನೂ ತನ್ನ ನಿಶ್ಚಿತ ವಿಚಾರಧಾರೆಗನುಗುಣವಾಗಿಯೇ ರಾಜನೈತಿಕ ಹಾಗೂ ಸಾಮಾಜಿಕ ವಿಷಯಗಳ ಮೇಲೆ ಪ್ರಶ್ನೆ ಕೇಳುತ್ತಾನೆ. ನಿಮ್ಮ ಯಾವ ಉತ್ತರವಾದರೂ ಪ್ರಶ್ನಕರ್ತನಿಗೆ ಸರಿದೋರದಿದ್ದರೆ, ಆತ ನಿಮ್ಮ ಬಗ್ಗೆ ನಿರುತ್ಸಾಹ ತಳೆಯುತ್ತಾನೆಂಬುದು ನಿಜವಷ್ಟೆ ?

ಬನಾರಸ್ ಹಿಂದೂ ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪಡೆದ ತರುಣನೊಬ್ಬ ಒಂದು ಕಾಲೇಜಿನ ಲೆಕ್ಚರರ್ ಹುದ್ದೆಗೆ ಅರ್ಜಿಹಾಕಿದ. ಆ ಕಾಲೇಜಿನಲ್ಲಿ 'ಜಾಟ' (ಒಂದು ಜಾತಿ)ರದೇ ಪ್ರಾಬಲ್ಯವಿತ್ತು. ಎಂತಲೇ ಇಂಟರ್ವ್ಯೂ ಬೋರ್ಡಿನಲ್ಲಿ ಅವರೇ ಹೆಚ್ಚಾಗಿದ್ದರು. ಇಂಟರ್ವ್ಯೂ ವೇಳೆ ಆ ತರುಣನೊಡನೆ ಚೌಧರೀ ಚರಣಸಿಂಹರ ವ್ಯಕ್ತಿತ್ವದ ಬಗ್ಗೆ ಪ್ರಶ್ನಿಸಲಾಯಿತು. ಆಗ ಅವನು ಚರಣಸಿಂಹರ ಬಗ್ಗೆ ಮಾತಾಡುತ್ತ ಅವರು ಮುಂಡಿಸಿದ 'ಮುಂಗಡ ಪತ್ರ'ವನ್ನು ಕಟುವಾಗಿ ಟೀಕಿಸಿದ.

ಹೋಯಿತು. ... ಪರಿಣಾಮವಾಗಿ ಆತ

ಇನ್ನೊಬ್ಬ ಯುವಕನನ್ನು ಔಷಧಿನಿರ್ಮಾಣ ಸಂಸ್ಥೆಯೊಂದು 'ಏಜಂಟ್' ಹುದ್ದೆಗಾಗಿ ಇಂಟರ್ವ್ಯೂಗೆ ಕರೆಯಿತು. 'ಕಾಲೇಜ್ ಅಧ್ಯಯನದ ವೇಳೆ ನೀವು ಯಾವಾವ ಚಟುವಟಿಕೆಗಳಲ್ಲಿ ಭಾಗವಹಿಸಿದ್ದಿರಿ?'–ಎಂದು ಅವನನ್ನು ಕೇಳಲಾಯಿತು.

"ನಾನು ವಿದ್ಯಾರ್ಥಿಸಂಘದ ಚಟುವಟಿಕೆಗಳಲ್ಲಿ ಸ್ಪರ್ಧಿಸಿದೆ. ಒಂದು ವರ್ಷ ಯೂನಿಯನ್ ಸೆಕ್ರೆಟರಿಯಾಗಿದ್ದೆ. ಅದುತನಕ ಕಾಲೇಜಿಗೆ ಬರೇ ೨ ಬಸ್‌ಗಳು ಬರುತ್ತಿದ್ದವು. ನಾನು ಚಳವಳಿ ಹೂಡಿ ಸರಕಾರ ಹಾಗೂ ಸಾರಿಗೆ ವಿಭಾಗದ ಮೇಲೆ ಒತ್ತಡಹೇರಿ ಕಾಲೇಜಿಗೆ ಐದು ಬಸ್‌ಗಳು ಬರುವಂತೆ ಮಾಡಿದೆ."

ಈ ಯುವಕನನ್ನು ಆರಿಸಿದರೆ ಮುಂದೊಂದುದಿನ ತನಗೂ ಸಂಕಟ ತಂದೊಡ್ಡಬಹುದೆಂದು ಆ ಸಂಸ್ಥೆ ಭಾವಿಸಿದುದರಲ್ಲಿ ಆಶ್ಚರ್ಯವೇನು ?



ನಿಮ್ಮ ಉತ್ತರ ಯಾರಿಗಾದರೂ ಮನನೋಯಿಸುವಂತಿದ್ದರೆ ನಿಮ್ಮ ಸಫಲತೆ ಸಂದಿಗ್ಧವೇ.

ನೀವು ನಿಮ್ಮ ಮಾತನ್ನು ಸ್ಪಷ್ಟ ಹಾಗೂ ನಿಷ್ಪಕ್ಷಪಾತವಾಗಿ ಹೇಳುವುದೇ ಇಂಟರ್ವ್ಯೂದಲ್ಲಿ ಸಫಲತೆ ಪಡೆಯುವ ಮೂಲ ಮಂತ್ರ. (ಹಿಂದಿಯಿಂದ)

---

**ಯೋಗ :** ಯೋಗವೆಂದರೆ 'ಚಿತ್ತವೃತ್ತಿ ನಿರೋಧ' ಇಂದ್ರಿಯಗಳು ನಿಗ್ರಹಿಸಲ್ಪಟ್ಟು, ಚಂಚಲ ಮನಸ್ಸಿಗೆ ಶಾಂತಿ ತರುವ ಕ್ರಿಯಾತ್ಮಕ ಮಾರ್ಗದಲ್ಲಿ ನಮ್ಮ ಕ್ರಿಯಾಶಕ್ತಿಯನ್ನು ನಡೆಸುವುದೇ ಯೋಗ.

**ಯೋಗಿ :** ಸದಾ ಸಮಾಧಾನ ಚಿತ್ತರಾಗಿ ಜೀವನದಲ್ಲಿಯ ಉದ್ರೇಕ ಎಬ್ಬಿಸುವ ಪರಿಸ್ಥಿತಿಯಲ್ಲಿ ಶಾಂತತೆಯನ್ನು ಕಳೆದುಕೊಳ್ಳದೇ ಇರುವವನೇ ಯೋಗಿ.

—ಎಸ್.ಎಸ್.

# ಪುರಾಣ ಮುನಿಗಳು

## ಆಪಸ್ತಂಬ

—ಪ. ರಾಮಕೃಷ್ಣಶಾಸ್ತ್ರಿ

ಭೃಗುಮಹರ್ಷಿಯ ವಂಶದಲ್ಲಿ ಆಪಸ್ತಂಬ ಎಂಬ ಋಷಿಯು ಜನಿಸಿದ. ಸ್ಮೃತಿಗಳನ್ನು ಬರೆದ ಹದಿನೆಂಟು ಮಂದಿ ಋಷಿಗಳಲ್ಲಿ ಅವನು ಒಬ್ಬನಾಗಿದ್ದ. ಕೃಷ್ಣ ಯಜುರ್ವೇದ ಶಾಖೆಯನ್ನು ಅವಲಂಬಿಸಿದವರಿಗೆ ಅಗತ್ಯವಾದ ಗೃಹ್ಯ ಸೂತ್ರಗಳನ್ನು ಅವನು ಬರೆದನು. ಅವನು ಯಜ್ಞಯಾಗಾದಿ ಕರ್ಮಗಳನ್ನಾಚರಿಸುತ್ತ ತನ್ನ ಆಶ್ರಮದಲ್ಲಿ ಹಲವು ಮಂದಿ ಶಿಷ್ಯರಿಗೆ ಪಾಠಪ್ರವಚನ ಬೋಧಿಸಿಕೊಂಡಿದ್ದ. ಮಹಾ ಪತಿವ್ರತೆಯಾದ ಅಕ್ಷಸೂತ್ರಿ ಎಂಬಾಕೆ ಅವನಿಗೆ ಹೆಂಡತಿ. ಅವರಿಬ್ಬರಿಗೆ ಕಾರ್ಕಿ ಎಂಬ ಮಗನೂ ಜನಿಸಿದ್ದ. ಆಪಸ್ತಂಬನು ಮಹಾತಪಸ್ವಿಯಾಗಿದ್ದ.

ಒಂದು ದಿನ ಒಬ್ಬ ಬ್ರಾಹ್ಮಣ ಶ್ರಾದ್ಧ ಮಾಡಬೇಕಾಗಿ ಬಂತು. ಶ್ರಾದ್ಧಕ್ಕೆ ತಕ್ಕ ವಿಪ್ರೋತ್ತಮರು ಸಿಗದ ಕಾರಣ ವಿಶ್ವ ದೇವತೆಗಳನ್ನು, ಪಿತೃದೇವತೆಗಳನ್ನು ಮಹಾ ವಿಷ್ಣುವನ್ನು ದರ್ಭೆಯಿಂದ ಆವಾಹಿಸಿ ಶ್ರಾದ್ಧವನ್ನು ಮುಗಿಸಿದ. ಆ ಹೊತ್ತಿಗೆ ಆಪಸ್ತಂಬ ಅಲ್ಲಿಗೆ ಹೋದ. ಬ್ರಾಹ್ಮಣನು ಅವನಿಗೆ ಭೋಜನ ಬಡಿಸಿ, "ತೃಪ್ತಿಯಾಯಿತೇ ?" ಎಂದು ಕೇಳಿದ. ಆಪಸ್ತಂಬನು ತೃಪ್ತಿಯಾಯಿತೆಂದು ಹೇಳುವ ಬದಲು "ಸ್ವಲ್ಪ ಮೊಸರನ್ನು ಅನ್ನವನ್ನೂ ತಾ" ಎಂದ.

ಅತಿಥಿಗೆ ಅತೃಪ್ತಿಯಾದರೆ ಶ್ರಾದ್ಧದ ಫಲವು ವ್ಯರ್ಥವಾಗುತ್ತದೆಂದು ತಿಳಿದು ಬ್ರಾಹ್ಮಣನಿಗೆ ಕೋಪ ಬಂತು. ಅವನು ಆಪಸ್ತಂಬನಿಗೆ ಶಾಪವನ್ನು ಕೊಡಲು ಕೈಯಲ್ಲಿ ನೀರು ಹಿಡಿದು ಕೆಳಗೆ ಚೆಲ್ಲಿದ. ಆ ನೀರು ಕೆಳಗೆ ಬಿದ್ದರೆ ಶಾಪವು ಫಲಿಸುತ್ತದೆಂದು ಆಪಸ್ತಂಬನು ತನ್ನ ತಪಸ್ಸಿನ ಪ್ರಭಾವದಿಂದ ನೀರನ್ನು ಕೆಳಗೆ ಬೀಳದಂತೆ ತಡೆದು ನಿಲ್ಲಿಸಿದ. ಹೀಗೆ ಆಪ್ (ನೀರನ್ನು) ಸ್ತಂಬ (ನಿಲ್ಲಿಸಿದ) ಗೊಳಿಸಿದ್ದರಿಂದ ಅವನಿಗೆ ಆಪಸ್ತಂಬ ಎಂಬ ಹೆಸರು ಬಂತು. ಅನಂತರ ಆಪಸ್ತಂಬನು ಬ್ರಾಹ್ಮಣನಿಗೆ "ಶ್ರಾದ್ಧ ಮಾಡಲು ಗಾಯತ್ರಿಜಪ ಮಾಡುವ ಆಚಾರಶೀಲರಾದ ಬ್ರಾಹ್ಮಣರು ಸಿಕ್ಕಿದರೆ ಸಾಕು. ಇಂಥವರಿಲ್ಲದೆ ಶ್ರಾದ್ಧವನ್ನು ಮಾಡಬಾರದು" ಎಂದು ಉಪದೇಶಿಸಿ ಹೊರಟುಹೋದ.

ಆಪಸ್ತಂಬ ನೀರಿನೊಳಗೆ ಮುಳುಗಿ ಯೋಗಾಭ್ಯಾಸ ಮಾಡುವ ಜಲಸ್ಥಂಬನ ವಿಧಾನವನ್ನು ಅರಿತಿದ್ದ. ಒಂದು ಸಲ ಅವನು ನರ್ಮದಾ ನದಿಯಲ್ಲಿ ಮುಳುಗಿ



ಕೊಂಡು ಧೈವಧ್ಯಾನದಲ್ಲಿ ನಿರತನಾಗಿದ್ದ. ಆಗ ಎಲ್ಲಾ ಜಾತಿಯ ಮೀನುಗಳೂ ಅವನಿಗೆ ಪ್ರದಕ್ಷಿಣೆ ಹಾಕುತ್ತಾ ಈ ಮಹಾಮುನಿಯ ಸಾನ್ನಿಧ್ಯದಲ್ಲಿ ಸಂತೋಷವನ್ನು ಪಡೆಯಲಾರಂಭಿಸಿದುವು. ಆದರೆ ಮೀನುಗಾರರಿಗೆ ಎಲ್ಲಿ ಬಲೆ ಹಾಕಿದರೂ ಮೀನು ಸಿಗಲಿಲ್ಲ. ಜೀವನೋಪಾಯವೇ ನಡೆಯಲಿಲ್ಲ. ಅವರು ಮೀನನ್ನು ಹುಡುಕುತ್ತಾ ನದಿ ದಂಡೆಯಲ್ಲಿ ಸಾಗುತ್ತಾ ಬಂದು ಮೀನುಗಳೆಲ್ಲವೂ ಒಂವೇ ಕಡೆ ಸೇರಿಕೊಂಡಿರುವುದನ್ನು ಕಂಡರು. ಅವರಿಗೆ ತುಂಬಾ ಸಂತೋಷವಾಯಿತು. ಗಟ್ಟಿಯಾದ ಬಲೆಯೊಂದನ್ನು ತಂದು ಅಲ್ಲಿಗೆ ಬೀಸಿದರು.

ಮೀನುಗಾರರು ಬೀಸಿದ ಬಲೆಯಲ್ಲಿ ಮೀನುಗಳ ಬದಲು ಆಪಸ್ತಂಬ ಋಷಿಯು ಸಿಲುಕಿಕೊಂಡ. ಅವರು ಅವನನ್ನು ಮೇಲಕ್ಕೆಳೆದರು. ಬಲೆಯಲ್ಲಿ ಋಷಿಯನ್ನು ಕಂಡು ಗಾಬರಿಯಾಗಿ, "ನಮ್ಮದು ತಪ್ಪಾಯಿತು, ಕ್ಷಮಿಸಬೇಕು" ಎಂದು ಕೈಮುಗಿದು ಬೇಡಿಕೊಂಡರು. ಆಪಸ್ತಂಬನು ಕೋಪಗೊಳ್ಳದೆ, "ನಾನು ವರುಷಗಟ್ಟಳೆಯಿಂದ ಇಲ್ಲಿ ನೀರಿನಲ್ಲಿ ನೆಲೆಸಿದ್ದೆ. ಈ ಮೀನುಗಳೆಲ್ಲವೂ ನನ್ನ ಸುತ್ತಲೂ ಸೇರಿಕೊಂಡವು. ಅವುಗಳನ್ನು ರಕ್ಷಿಸುವುದಕ್ಕಾಗಿ ನಾನೇ ನಿಮ್ಮ ಬಲೆಯಲ್ಲಿ ಸಿಲುಕಿಕೊಂಡೆ" ಎಂದು ಹೇಳಿದ. ಆಗ ಮೀನುಗಾರರ ಯಜಮಾನ ಮುಂದೆ ಬಂದು, "ಸ್ವಾಮಿ, ಅನೇಕ ದಿವಸಗಳಿಂದ ಒಂದೇ ಒಂದು ಮೀನೂ ನಮಗೆ ಸಿಕ್ಕಲಿಲ್ಲ. ನಮ್ಮ ಸಂಸಾರದವರು ಉಪವಾಸದಿಂದಿದ್ದಾರೆ. ನಮಗೆ ಬದುಕುವ ದಾರಿ ಹೇಗೆ ? " ಎಂದು ಖಿನ್ನನಾಗಿ ಹೇಳಿದ.

ಆಗ ಆಪಸ್ತಂಬನು, "ನೀವು ಈ ದೇಶದ ರಾಜನಾದ ನಾಭಾಗನ ಬಳಿಗೆ ಹೋಗಿ ಒಬ್ಬ ಋಷಿಯು ಬಲೆಯಲ್ಲಿ ಸಿಕ್ಕಿಕೊಂಡಿದ್ದಾನೆಂದು ತಿಳಿಸಿ, ಅವನನ್ನು ಕರೆದುಕೊಂಡು ಬನ್ನಿ" ಎಂದ.

ಮೀನುಗಾರರು ವಿಚಾರ ತಿಳಿಸಿದಾಗ ನಾಭಾಗನು ಓಡೋಡಿ ಬಂದು, "ಮಹರ್ಷಿಗಳೇ ನನ್ನ ಅರಮನೆಗೆ ದಯಮಾಡಿಸಬೇಕು" ಎಂದು ಪ್ರಾರ್ಥಿಸಿದ. ಅದಕ್ಕೆ ಆಪಸ್ತಂಬನು, ರಾಜಾ, ಈ ಬೆಸ್ತರ ಬಲೆಗೆ ಸಿಕ್ಕಿದ ನಾನು ಈಗ ಅವರ ಸೊತ್ತು. ನನ್ನ ಬದಲು ಅವರಿಗೆ ಸರಿಯಾದ ಬೆಲೆ ಕೊಟ್ಟು ನನ್ನನ್ನು ಬಿಡಿಸಿಕೊಂಡು ಹೋಗು" ಎಂದನು.

"ಸರಿ, ಒಂದು ಲಕ್ಷ ವರಹಗಳನ್ನು ಕೊಡುತ್ತೇನೆ" ಎಂದ ರಾಜ. "ಛೀ ಛೀ ಅದು ಸರಿಯಾದ ಬೆಲೆ ಅಲ್ಲ" ಎಂದು ಆಕ್ಷೇಪಿಸಿದ ಆಪಸ್ತಂಬ. ರಾಜನು ಕೋಟಿ ಗಟ್ಟಲೆ ಬಂಗಾರ ನಾಣ್ಯ ಕೊಡುತ್ತೇನೆಂದು ಹೇಳಿದರೂ ಅದು ಒಬ್ಬ ಬ್ರಾಹ್ಮಣನ ಸರಿಯಾದ ಬೆಲೆ ಅಲ್ಲವೆಂದೇ ಆಪಸ್ತಂಬ ವಾದಿಸಿದ. ರಾಜನು ಬೇರೆ ದಾರಿಗಾಣದೆ

ಮಂತ್ರಿಗಳನ್ನು ಗುರುಹಿರಿಯರನ್ನು ಬರಹೇಳಿ ಸಮಾಲೋಚಿಸಿದಾಗ ಲೋಮಶನೆಂಬ ಋಷಿ, "ರಾಜಾ, ಆಪಸ್ತಂಬನಿಗೆ ಸರಿದೂಗುವ ಬೆಲೆ ಎಂದರೆ ಯೋಗ್ಯವಾದ ಒಂದು ಹಸು ಮಾತ್ರ. ಹಸುವಿನ ದೇಹದಲ್ಲಿ ಮುವತ್ತುಮೂರು ಕೋಟಿ ದೇವತೆಗಳು ನೆಲೆಸಿದ್ದಾರೆ" ಎಂದು ಉಪಾಯ ಹೇಳಿಕೊಟ್ಟ.

ರಾಜನು ಹಸುವನ್ನು ತಂದು ನಿಲ್ಲಿಸಿದಾಗ ಜ್ಞಾನಿಯಾದ ಆಪಸ್ತಂಬನು ಮುಗುಳ್ನಗುತ್ತಾ ಅದನ್ನು ತನ್ನ ಸರಿಯಾದ ಬೆಲೆಯೆಂದು ಒಪ್ಪಿ, ಸ್ವೀಕರಿಸಲು ಬೆಸ್ತರಿಗೆ ಹೇಳಿದ.

ಒಮ್ಮೆ ಅಗಸ್ತ್ಯನೊಂದಿಗೆ ಆಪಸ್ತಂಬ, "ತ್ರಿಮೂರ್ತಿಗಳಲ್ಲಿ ನಿಜವಾದ ಭಗವಂತ ಯಾರು ?" ಎಂದು ಕೇಳಿದ. ಅದಕ್ಕೆ ಅಗಸ್ತ್ಯ, "ರೂಪವನ್ನೂ ಗುಣವನ್ನು ಗೆದ್ದ ಈಶ್ವರ" ಎಂದ.

ಆಪಸ್ತಂಬ ಈಶ್ವರನನ್ನು ಒಲಿಸಿಕೊಂಡ. ಆ ಸ್ಥಳದಲ್ಲಿದ್ದ ತೀರ್ಥಕ್ಕೆ ಅವನ ಹೆಸರು ಬರಲೆಂದೂ ಅದರಲ್ಲಿ ಸ್ನಾನ ಮಾಡಿದವರಿಗೆ ಬ್ರಹ್ಮಜ್ಞಾನ ಲಭಿಸಲೆಂದೂ ಈಶ್ವರ ವರವಿತ್ತ.

ದಿತಿ ಕಶ್ಯಪರು ದೇವತೆಗಳಿಗಿಂತ ಬಲಿಷ್ಠರಾದ ಮಕ್ಕಳು ತಮಗೆ ಜನಿಸಬೇಕೆಂದು ಒಂದು ಸಲ ಬಯಸಿದರು- ಅಗ ಆಪಸ್ತಂಬ ಋಷಿ ಪುತ್ರಕಾಮೇಷ್ಠಿಯಾಗ ಮಾಡಿಸಿ ಮರುದ್ಗಣಗಳು ಅವರಿಗೆ ಮಕ್ಕಳಾಗಿ ಜನಿಸುವಂತೆ ಮಾಡಿದ.

---

## ಅಡಿಗೆಯಲ್ಲಿ ಅರಿಶಿನ ಬಳಸುವ ಉದ್ದೇಶ :

ನಾನಾ ವಿಧವಾದ ರೋಗಗಳನ್ನು ಗುಣಪಡಿಸುವ ಶಕ್ತಿ ಅರಿಶಿನದಲ್ಲಿ ಅಡಗಿದೆ. ಆಹಾರ ಸುಗಂಧಯುಕ್ತವಾಗುವುದಲ್ಲದೆ ಅದರ ಮಾಧುರ್ಯ ಹೆಚ್ಚುವುದು. ಕಣ್ಣಿಗೆ ಹರ್ಷವನ್ನೀಯುವ ಬಣ್ಣ ಆಹಾರಕ್ಕೆ ಬರುವುದು. ಇಷ್ಟೇ ಅಲ್ಲದೆ, ಆಹಾರ ಸುಲಭವಾಗಿ ಜೀರ್ಣಿಸುವುದು. ಅರಿಶಿನದಲ್ಲಿ ಜೀರ್ಣಕಾರಕ, ಕ್ರಿಮಿನಾಶಕ, ಕಫ ನಿವಾರಕ ಮತ್ತು ರಕ್ತ ಶೋಧಕ ಗುಣಗಳಿರುವುವು.



# ಉತ್ಪಾದನಾ ಕ್ರಾಂತಿ ತರಲಿರುವ ಕಡಲೆ ತಳಿಗಳು ಬರಲಿವೆ

—ಜಿ.ಆರ್. ರಂಗಸ್ವಾಮಯ್ಯ

ಆರು ಕಾಸು ಕೊಟ್ಟು ಕಡಲೆ–ಬೆಲ್ಲ ತಿಂದು ತೃಪ್ತಿ ಪಡುತ್ತಿದ್ದ ಕಾಲವೊಂದಿತ್ತು. ಇಂದಿಗೂ ಉತ್ತರ ಭಾರತದಲ್ಲಿ ಜನಸಾಮಾನ್ಯನ ಬಾಯಿಯಲ್ಲಿ ಸಾಮಾನ್ಯವಾಗಿ ಕೇಳಿಬರುವ ಮಾತು— "ದಾಲ್ ರೋಟಿ ಖಾವೊ; ಪ್ರಭುಕ ಗುಣ್ ಗಾವೊ" ಅಂದರೆ ರೊಟ್ಟಿಯ ಜೊತೆ ಬೇಳೆ ಸೇರಿದರೆ ಶರ್ಕರ ಪಿಷ್ಟದ ಜೊತೆ ಪ್ರೋಟೀನ್ ಸೇರಿ ಸಂಪನ್ನ ಆಹಾರವಾಯಿತು. ಇಂದು ರೊಟ್ಟಿಯ ಚಿಂತೆ ಅಷ್ಟಾಗಿ ಇಲ್ಲ! ಅನ್ನದ ಉತ್ಪಾದನೆ ಗಣನೀಯವಾಗಿ ಹೆಚ್ಚಿದೆ. ಆದರೆ ಬೇಳೆ ಕಾಳುಗಳ ಉತ್ಪಾದನೆಯಲ್ಲಿ ನಮ್ಮ ಕೃಷಿ ವಿಜ್ಞಾನಿಗಳಿಗೆ ಇನ್ನೂ ಯಶಸ್ಸು ದಕ್ಕಿಲ್ಲ. ಎರಡನೆ ಯೋಜನೆಯಲ್ಲಿ ತಲಾ ೬೮.೫ ಗ್ರಾಂ ಬೇಳೆ ಲಭ್ಯವಿದ್ದರೆ ಇದು ನಾಲ್ಕನೇ ಯೋಜನೆ ಹೊತ್ತಿಗೆ ತಲಾ ೫೪.೯ ಗ್ರಾಂ ಗಳಿಗೆ ಇಳಿಯಿತು. ಕಾರಣ ಸಾಂಪ್ರದಾಯಿಕ ತಳಿಗಳು, ಕೃಷಿ ವಿಧಾನಗಳು ಹಾಗೂ ರೋಗ–ರುಜಿನಗಳು. ನಮ್ಮ ರೈತರು ಇಂದಿಗೂ ಇವನ್ನು ಪ್ರಮುಖ ಬೆಳೆಯಾಗಿ ಬೆಳೆಯುತ್ತಿಲ್ಲ; ಜಮೀನಿನಲ್ಲಿ ಪ್ರಮುಖ ಬೆಳೆ ತೆಗೆದುಕೊಂಡಮೇಲೆ ಕಳೆದುಳಿದ ತೇವಾಂಶವನ್ನು ಬಳಸಿಕೊಂಡು ಕಡಲೆಯನ್ನೋ, ಹೆಸರನ್ನೋ ಬಿತ್ತುತ್ತಾರೆ; ಬಂದಷ್ಟು ಬರಲಿ ಎಂದು ಕುಳಿತು ಬಿಡುತ್ತಾರೆ. ಬೇಳೆಕಾಳುಗಳು ರೈತನಿಂದ ಏನನ್ನೂ ಹೆಚ್ಚಿಗೆ ಕೇಳದೆ ಬಹಳಷ್ಟನ್ನು ನೀಡುತ್ತವೆ. ಜೊತೆಗೆ ಜಮೀನನ್ನು ಹೆಚ್ಚು ಫಲವತ್ತನ್ನಾಗಿ ಮಾಡುತ್ತವೆ. ಪ್ರತಿಯೊಂದು ಬೇಳೆಕಾಳಿನ ಗಿಡವೂ ಒಂದು ರಸಗೊಬ್ಬರದ ಕಿರುಕೈಗಾರಿಕೆ ಎಂದರೆ ತಪ್ಪಾಗಲಾರದು. ರಾಸಾಯನಿಕ ಗೊಬ್ಬರಗಳು ಜಮೀನನ್ನು ಫಲವತ್ತನ್ನಾಗಿ ಮಾಡುವುದಕ್ಕಿಂತ (ಕೆಲವೊಮ್ಮೆ ಜಮೀನಿನಲ್ಲಿ ಇರುವ ಸಾರವನ್ನು ಹಾಳುಮಾಡುವುದುಂಟು) ಹೆಚ್ಚು ಕಡಲೆ ಅಥವಾ ಬೇಳೆಕಾಳುಗಳು ಮಾಡುತ್ತವೆ. ಇಂಥ ಸಶಕ್ತ ಬೆಳೆಯನ್ನು ಅಶಕ್ತ ಭೂಮಿಯಲ್ಲಿ ಇಂದಿಗೂ ಸಾಂಪ್ರದಾಯಿಕ ರೀತಿಯಲ್ಲೇ ಬೆಳೆಯಲಾಗುತ್ತಿದೆ.

ಇಂಥ ಬೇಳೆಕಾಳುಗಳ ಬೆಳೆಗಳಲ್ಲಿ ಕಡಲೆ ಒಂದು ಪ್ರಮುಖ ಬೆಳೆ. ಕಡಲೆಯ ಉತ್ಪಾದನೆಯಲ್ಲಿ ಭಾರತ ಮುಂದಿದೆ. ವಿಶ್ವದ ಕಡಲೆ ಉತ್ಪಾದನೆಯಲ್ಲಿ ಭಾರತದ ಪಾಲು ಶೇ. ೧೦ರಷ್ಟು(೫.೪ ದಶಲಕ್ಷ ಟನ್). ಕಡಲೆಯಲ್ಲಿ ಎರಡು ವಿಧ. ಒಂದು ದೇಸೀ ಕಡಲೆ,ಎರಡನೆಯದು ಕಾಬೂಲಿ ಕಡಲೆ. ದೇಸೀ ಕಡಲೆಯನ್ನು ಭಾರತ,

ಇಂಟರ್‌ವ್ಯೂ ಪರಿಣಾಮ ಹೊರಬಿದ್ದಾಗ ಆ ತರುಣನ ಹೆಸರೇ ಇರಲಿಲ್ಲ. ಅವನ ಬದಲು ಸಾಧಾರಣ ಎಂ.ಎ. ಪದವೀಧರನನ್ನು ಆರಿಸಲಾಗಿತ್ತು. ಚರಣ ಸಿಂಹರು ಜಾಟರಿದ್ದುದರಿಂದ ಅವರ ಬಗ್ಗೆ ದುರ್ಭಾವನೆ ತಳೆದ ಯುವಕನನ್ನು ಆ ಜನ ತಿರಸ್ಕರಿಸಿದ್ದರೆಂಬುದು ನಿಸ್ಸಂದೇಹ.

ಇನ್ನೊಂದು ಉದಾಹರಣೆ ನೋಡಿರಿ. ಬಂಗಾಳದ ಪ್ರಖ್ಯಾತ ಉದ್ಯೋಗ ಸಂಸ್ಥೆಯೊಂದರ ಮ್ಯಾನೇಜರ್ ಹುದ್ದೆಗೆ ಇಂಟರ್‌ವ್ಯೂ ಕರೆಯಲಾಯಿತು. ಒಬ್ಬ ಉಮೇದ್ವಾರನೊಡನೆ ರಷ್ಯ ಅಮೇರಿಕೆಗಳನ್ನು ಹೋಲಿಸಿ ವಿಮರ್ಶಿಸಲು ಹೇಳಲಾಯಿತು. ಆತ ಅಮೇರಿಕೆಯನ್ನು ಬಂಡವಾಳಶಾಹಿ, ಪ್ರತಿಕ್ರಿಯಾವಾದಿ, ಭೋಗವಾದಿ, ವಿಸ್ತಾರವಾದಿ–ಮೊದಲಾದ ಶಬ್ದಗಳೊಂದಿಗೆ ನಿಂದಿಸಿ ರಷ್ಯವನ್ನು ಹೊಗಳತೊಡಗಿದ. ಪರಿಣಾಮವಾಗಿ ಆತನಿಗೆ ನೌಕರಿ ಸಿಗಲ್ಲಿಲ್ಲ. ಆತ ಕಮ್ಯುನಿಸ್ಟ್ ಇರಬೇಕೆಂದು ಸಂಸ್ಥೆಯವರು ಭಾವಿಸಿದರು.

## ವೈಯಕ್ತಿಕ ಅಭಿಪ್ರಾಯಕ್ಕೆ ಮಹತ್ವ ಕೊಡದಿರಿ

ಇನ್ನೊಬ್ಬನೊಡನೆ ಸಾಂಪ್ರದಾಯಿಕ ದಂಗೆಗಳ ಬಗ್ಗೆ ಪ್ರಶ್ನಿಸಿದಾಗ–'ಈ ದಂಗೆಗಳಿಂದಾಗಿ ನಮ್ಮ ಸರಕಾರ ಕೈಲಾಗದುದೆಂದು ಸ್ಪಷ್ಟವಾಗುತ್ತದೆ'–ಎಂದ.

ಈಗ ನೀವೇ ಯೋಚಿಸಿರಿ........ಇದು ಪ್ರಶ್ನೆಗೆ ತಕ್ಕ ಉತ್ತರವೆ? ಇಂಥ ಉತ್ತರ ವ್ಯಕ್ತಿಯ ವಿಚಾರಧಾರೆಯನ್ನಷ್ಟೇ ಸ್ಪಷ್ಟಪಡಿಸುತ್ತದೆ. ಪರಿಣಾಮವಾಗಿ ಆತನಿಗೆ ಆ ಹುದ್ದೆ ದೊರೆಯದೆ ಹೋಯಿತು.

ಇನ್ನೊಬ್ಬ ಯುವಕನನ್ನು ಔಷಧಿನಿರ್ಮಾಣ ಸಂಸ್ಥೆಯೊಂದು 'ಏಜಂಟ್' ಹುದ್ದೆಗಾಗಿ ಇಂಟರ್‌ವ್ಯೂಗೆ ಕರೆಯಿತು. 'ಕಾಲೇಜ್ ಅಧ್ಯಯನದ ವೇಳೆ ನೀವು ಯಾವಾವ ಚಟುವಟಿಕೆಗಳಲ್ಲಿ ಭಾಗವಹಿಸಿದ್ದಿರಿ?'–ಎಂದು ಅವನನ್ನು ಕೇಳಲಾಯಿತು.

"ನಾನು ವಿದ್ಯಾರ್ಥಿಸಂಘದ ಚಟುವಟಿಕೆಗಳಲ್ಲಿ ಸ್ಪರ್ಧಿಸಿದೆ. ಒಂದು ವರ್ಷ ಯೂನಿಯನ್ ಸೆಕ್ರೆಟರಿಯಾಗಿದ್ದೆ. ಅದುತನಕ ಕಾಲೇಜಿಗೆ ಬರೇ ೨ ಬಸ್‌ಗಳು ಬರುತ್ತಿದ್ದವು. ನಾನು ಚಳವಳಿ ಹೂಡಿ ಸರಕಾರ ಹಾಗೂ ಸಾರಿಗೆ ವಿಭಾಗದ ಮೇಲೆ ಒತ್ತಡಹೇರಿ ಕಾಲೇಜಿಗೆ ಐದು ಬಸ್‌ಗಳು ಬರುವಂತೆ ಮಾಡಿದೆ."

ಈ ಯುವಕನನ್ನು ಆರಿಸಿದರೆ ಮುಂದೊಂದುದಿನ ತನಗೂ ಸಂಕಟ ತಂದೊಡ್ಡಬಹುದೆಂದು ಆ ಸಂಸ್ಥೆ ಭಾಸಿವಿದುದರಲ್ಲಿ ಆಶ್ಚರ್ಯವೇನು?



ಇನ್ನೊಬ್ಬ ಯುವಕನನ್ನು ಅಧ್ಯಾಪಕ ಹುದ್ದೆಯ ಇಂಟರ್‌ವ್ಯೂಗೆ ಕರೆಯಲಾಯಿತು. 'ಸಾದಾಜೀವನ ಉಚ್ಚವಿಚಾರ' ಎಂಬ ಸಿದ್ಧಾಂತವನ್ನು ನೆನೆದು ಆತ ಧೋತ್ರ ಹಾಗೂ ಖಾದೀ ಅಂಗಿ ತೊಟ್ಟು ಬಂದ. ಹೊಸದಾಗಿ ಧರಿಸಿದ್ದುದರಿಂದ ಅದೂ ಸರಿಯಾಗಿರಲಿಲ್ಲ. ಹೀಗಾಗಿ ಆತನಿಗೆ ಆ ನೌಕರಿ ಸಿಗಲಿಲ್ಲ.

## ಸಂಸ್ಥೆಯವರಿಗೇನು ಬೇಕು ?

ಯೂನಿಯನ್ ಕಟ್ಟಿಕೊಂಡು ಯಾವಾಗಲೂ ಹೊಡೆದಾಡುವವರಾಗಲೀ, ರಾಜನೀತಿಯಲ್ಲಿ ಮುಳುಗಿ ಹೊಸ ಹೊಸ ತಂಟೆ ತಂದೊಡ್ಡುವವರಾಗಲೀ ಸಂಸ್ಥೆಗಳಿಗೆ ಬೇಕಿಲ್ಲ. ನಿಷ್ಠೆಯಿಂದ ದುಡಿಯುವ ಕೆಲಸಗಾರರು ಅವಕ್ಕೆ ಬೇಕು. ಜಗತ್ತಿನ ಆಗುಹೋಗುಗಳ ಬಗ್ಗೆ ಪೂರ್ತಿ ತಿಳಿವಳಿಕೆ ಇರಬೇಕು. ಆದರೆ ಅನಗತ್ಯದ ಟೀಕೆ ಟಿಪ್ಪಣಿಗಳು ಬೇಕಿಲ್ಲ.

ಇಂಟರ್‌ವ್ಯೂದಲ್ಲಿ ಕೇಳಲಾದ ಪ್ರಶ್ನೆಗಳ ಬಗ್ಗೆ ನೀವೇನು ಯೋಚಿಸುತ್ತಿರೆಂಬುದು ಮುಖ್ಯವಲ್ಲ–ನೀವು ನಿಷ್ಪಕ್ಷಪಾತವಾಗಿ ಯೋಚಿಸುವಿರಾ?–ಎಂಬುದು ಮುಖ್ಯ. ನಿಮ್ಮ ಉತ್ತರದಿಂದ ಇಂಟರ್‌ವ್ಯೂ ತೆಗೆದುಕೊಳ್ಳುವ ಎಲ್ಲ ಸದಸ್ಯರಿಗೂ ಸಮಾಧಾನವಾಗುವಂತಿರಬೇಕು. ಅದು ನಿಮ್ಮಿಂದ ಸಾಧ್ಯವಿರದಿದ್ದರೆ, ಅಂತಹ ಪ್ರಶ್ನೆಗಳು ಬಂದಾಗ ನುಣ್ಣಗೆ ಜಾರಿಕೊಳ್ಳುವುದು ಲೇಸು'.

ಇಂಟರ್‌ವ್ಯೂವೇಳೆ ನಿಮ್ಮ ವ್ಯಕ್ತಿತ್ವವನ್ನು ನಿಮ್ಮ ಉತ್ತರಗಳಿಂದಲೇ ಅಳೆಯಲಾಗುವುದೆಂದು ನೆನಪಿಡಿರಿ. ನಿಮ್ಮ ಉತ್ತರ ಯಾರಿಗಾದರೂ ಮನನೋಯಿಸುವಂತಿದ್ದರೆ ನಿಮ್ಮ ಸಫಲತೆ ಸಂದಿಗ್ಧವೇ.

ನೀವು ನಿಮ್ಮ ಮಾತನ್ನು ಸ್ಪಷ್ಟ ಹಾಗೂ ನಿಷ್ಪಕ್ಷಪಾತವಾಗಿ ಹೇಳುವುದೇ ಇಂಟರ್‌ವ್ಯೂದಲ್ಲಿ ಸಫಲತೆ ಪಡೆಯುವ ಮೂಲ ಮಂತ್ರ. (ಹಿಂದಿಯಿಂದ) ●

---

**ಯೋಗ :** ಯೋಗವೆಂದರೆ 'ಚಿತ್ತವೃತ್ತಿ ನಿರೋಧ' ಇಂದ್ರಿಯಗಳು ನಿಗ್ರಹಿಸಲ್ಪಟ್ಟು, ಚಂಚಲ ಮನಸ್ಸಿಗೆ ಶಾಂತಿ ತರುವ ಕ್ರಿಯಾತ್ಮಕ ಮಾರ್ಗದಲ್ಲಿ ನಮ್ಮ ಕ್ರಿಯಾಶಕ್ತಿಯನ್ನು ನಡೆಸುವುದೇ ಯೋಗ.

**ಯೋಗಿ :** ಸದಾ ಸಮಾಧಾನ ಚಿತ್ತರಾಗಿ ಜೀವನದಲ್ಲಿಯ ಉದ್ರೇಕ ಎಬ್ಬಿಸುವ ಪರಿಸ್ಥಿತಿಯಲ್ಲಿ ಶಾಂತತೆಯನ್ನು ಕಳೆದುಕೊಳ್ಳದೇ ಇರುವವನೇ ಯೋಗಿ.

—ಎನ್.ಎಸ್.

ಮಂತ್ರಿಗಳನ್ನು ಗುರುಹಿರಿಯರನ್ನು ಬರಹೇಳಿ ಸಮಾಲೋಚಿಸಿದಾಗ ಲೋಮಶನೆಂಬ ಋಷಿ, "ರಾಜಾ, ಆಪಸ್ತಂಬನಿಗೆ ಸರಿದೂಗುವ ಬೆಲೆ ಎಂದರೆ ಯೋಗ್ಯವಾದ ಒಂದು ಹಸು ಮಾತ್ರ. ಹಸುವಿನ ದೇಹದಲ್ಲಿ ಮುವತ್ತುಮೂರು ಕೋಟಿ ದೇವತೆಗಳು ನೆಲೆಸಿದ್ದಾರೆ" ಎಂದು ಉಪಾಯ ಹೇಳಿಕೊಟ್ಟ.

ರಾಜನು ಹಸುವನ್ನು ತಂದು ನಿಲ್ಲಿಸಿದಾಗ ಜ್ಞಾನಿಯಾದ ಆಪಸ್ತಂಬನು ಮುಗುಳ್ನಗುತ್ತಾ ಅದನ್ನು ತನ್ನ ಸರಿಯಾದ ಬೆಲೆಯೆಂದು ಒಪ್ಪಿ, ಸ್ವೀಕರಿಸಲು ಬೆಸ್ತರಿಗೆ ಹೇಳಿದ.

ಒಮ್ಮೆ ಅಗಸ್ತ್ಯನೊಂದಿಗೆ ಆಪಸ್ತಂಬ, "ತ್ರಿಮೂರ್ತಿಗಳಲ್ಲಿ ನಿಜವಾದ ಭಗವಂತ ಯಾರು ? " ಎಂದು ಕೇಳಿದ. ಅದಕ್ಕೆ ಅಗಸ್ತ್ಯ, "ರೂಪವನ್ನೂ ಗುಣವನ್ನು ಗೆದ್ದ ಈಶ್ವರ" ಎಂದ.

ಆಪಸ್ತಂಬ ಈಶ್ವರನನ್ನು ಒಲಿಸಿಕೊಂಡ. ಆ ಸ್ಥಳದಲ್ಲಿದ್ದ ತೀರ್ಥಕ್ಕೆ ಅವನ ಹೆಸರು ಬರಲೆಂದೂ ಅದರಲ್ಲಿ ಸ್ನಾನ ಮಾಡಿದವರಿಗೆ ಬ್ರಹ್ಮಜ್ಞಾನ ಲಭಿಸಲೆಂದೂ ಈಶ್ವರ ವರವಿತ್ತ.

ದಿತಿ ಕಶ್ಯಪರು ದೇವತೆಗಳಿಗಿಂತ ಬಲಿಷ್ಠರಾದ ಮಕ್ಕಳು ತಮಗೆ ಜನಿಸಬೇಕೆಂದು ಒಂದು ಸಲ ಬಯಸಿದರು. ಆಗ ಆಪಸ್ತಂಬ ಋಷಿ ಪುತ್ರಕಾಮೇಷ್ಠಿಯಾಗ ಮಾಡಿಸಿ ಮರುದ್ಗಣಗಳು ಅವರಿಗೆ ಮಕ್ಕಳಾಗಿ ಜನಿಸುವಂತೆ ಮಾಡಿದ.

---

## ಅಡಿಗೆಯಲ್ಲಿ ಅರಿಶಿನ ಬಳಸುವ ಉದ್ದೇಶ :

ನಾನಾ ವಿಧವಾದ ರೋಗಗಳನ್ನು ಗುಣಪಡಿಸುವ ಶಕ್ತಿ ಅರಿಶಿನದಲ್ಲಿ ಅಡಗಿದೆ. ಆಹಾರ ಸುಗಂಧಯುಕ್ತವಾಗುವುದಲ್ಲದೆ ಅದರ ಮಾಧುರ್ಯ ಹೆಚ್ಚುವುದು. ಕಣ್ಣಿಗೆ ಹರ್ಷವನ್ನೀಯುವ ಬಣ್ಣ ಆಹಾರಕ್ಕೆ ಬರುವುದು. ಇಷ್ಟೇ ಅಲ್ಲದೆ, ಆಹಾರ ಸುಲಭವಾಗಿ ಜೀರ್ಣಿಸುವುದು. ಅರಿಶಿನದಲ್ಲಿ ಜೀರ್ಣಕಾರಕ, ಕ್ರಿಮಿನಾಶಕ, ಕಫ ನಿವಾರಕ ಮತ್ತು ರಕ್ತ ಶೋಧಕ ಗುಣಗಳಿರುವುವು.



# ಉತ್ಪಾದನಾ ಕ್ರಾಂತಿ ತರಲಿರುವ ಕಡಲೆ ತಳಿಗಳು ಬರಲಿವೆ

—ಜಿ.ಆರ್. ರಂಗಸ್ವಾಮಯ್ಯ

ಆರು ಕಾಸು ಕೊಟ್ಟು ಕಡಲೆ–ಬೆಲ್ಲ ತಿಂದು ತೃಪ್ತಿ ಪಡುತ್ತಿದ್ದ ಕಾಲವೊಂದಿತ್ತು. ಇಂದಿಗೂ ಉತ್ತರ ಭಾರತದಲ್ಲಿ ಜನಸಾಮಾನ್ಯನ ಬಾಯಿಯಲ್ಲಿ ಸಾಮಾನ್ಯವಾಗಿ ಕೇಳಿಬರುವ ಮಾತು— "ದಾಲ್ ರೋಟಿ ಖಾವೊ; ಪ್ರಭುಕ ಗುಣ್ ಗಾವೊ" ಅಂದರೆ ರೊಟ್ಟಿಯ ಜೊತೆ ಬೇಳೆ ಸೇರಿದರೆ ಶರ್ಕರ ಪಿಷ್ಟದ ಜೊತೆ ಪ್ರೋಟೀನ್ ಸೇರಿ ಸಂಪನ್ನ ಆಹಾರವಾಯಿತು. ಇಂದು ರೊಟ್ಟಿಯ ಚಿಂತೆ ಅಷ್ಟಾಗಿ ಇಲ್ಲ! ಅನ್ನದ ಉತ್ಪಾದನೆ ಗಣನೀಯವಾಗಿ ಹೆಚ್ಚಿದೆ. ಆದರೆ ಬೇಳೆ ಕಾಳುಗಳ ಉತ್ಪಾದನೆಯಲ್ಲಿ ನಮ್ಮ ಕೃಷಿ ವಿಜ್ಞಾನಿಗಳಿಗೆ ಇನ್ನೂ ಯಶಸ್ಸು ದಕ್ಕಿಲ್ಲ. ಎರಡನೆ ಯೋಜನೆಯಲ್ಲಿ ತಲಾ ೬೮.೫ ಗ್ರಾಂ ಬೇಳೆ ಲಭ್ಯವಿದ್ದರೆ ಇದು ನಾಲ್ಕನೇ ಯೋಜನೆ ಹೊತ್ತಿಗೆ ತಲಾ ೩೪.೯ ಗ್ರಾಂ ಗಳಿಗೆ ಇಳಿಯಿತು. ಕಾರಣ ಸಾಂಪ್ರದಾಯಿಕ ತಳಿಗಳು, ಕೃಷಿ ವಿಧಾನಗಳು ಹಾಗೂ ರೋಗ–ರುಜಿನಗಳು. ನಮ್ಮ ರೈತರು ಇಂದಿಗೂ ಇವನ್ನು ಪ್ರಮುಖ ಬೆಳೆಯಾಗಿ ಬೆಳೆಯುತ್ತಿಲ್ಲ; ಜಮೀನಿನಲ್ಲಿ ಪ್ರಮುಖ ಬೆಳೆ ತೆಗೆದುಕೊಂಡಮೇಲೆ ಕಳೆದುಳಿದ ತೇವಾಂಶವನ್ನು ಬಳಸಿಕೊಂಡು ಕಡಲೆಯನ್ನೋ, ಹೆಸರನ್ನೋ ಬಿತ್ತುತ್ತಾರೆ; ಬಂದಷ್ಟು ಬರಲಿ ಎಂದು ಕುಳಿತು ಬಿಡುತ್ತಾರೆ. ಬೇಳೆಕಾಳುಗಳು ರೈತನಿಂದ ಏನನ್ನೂ ಹೆಚ್ಚಿಗೆ ಕೇಳದೆ ಬಹಳಷ್ಟನ್ನು ನೀಡುತ್ತವೆ. ಜೊತೆಗೆ ಜಮೀನನ್ನು ಹೆಚ್ಚು ಫಲವತ್ತನ್ನಾಗಿ ಮಾಡುತ್ತವೆ. ಪ್ರತಿಯೊಂದು ಬೇಳೆಕಾಳಿನ ಗಿಡವೂ ಒಂದು ರಸಗೊಬ್ಬರದ ಕಿರುಕೈಗಾರಿಕೆ ಎಂದರೆ ತಪ್ಪಾಗಲಾರದು. ರಾಸಾಯನಿಕ ಗೊಬ್ಬರಗಳು ಜಮೀನನ್ನು ಫಲವತ್ತನ್ನಾಗಿ ಮಾಡುವುದಕ್ಕಿಂತ (ಕೆಲವೊಮ್ಮೆ ಜಮೀನಿನಲ್ಲಿ ಇರುವ ಸಾರವನ್ನು ಹಾಳುಮಾಡುವುದುಂಟು) ಹೆಚ್ಚು ಕಡಲೆ ಅಥವಾ ಬೇಳೆಕಾಳುಗಳು ಮಾಡುತ್ತವೆ. ಇಂಥ ಸಶಕ್ತ ಬೆಳೆಯನ್ನು ಅಶಕ್ತ ಭೂಮಿಯಲ್ಲಿ ಇಂದಿಗೂ ಸಾಂಪ್ರದಾಯಿಕ ರೀತಿಯಲ್ಲೇ ಬೆಳೆಯಲಾಗುತ್ತಿದೆ.

ಇಂಥ ಬೇಳೆಕಾಳುಗಳ ಬೆಳೆಗಳಲ್ಲಿ ಕಡಲೆ ಒಂದು ಪ್ರಮುಖ ಬೆಳೆ. ಕಡಲೆಯ ಉತ್ಪಾದನೆಯಲ್ಲಿ ಭಾರತ ಮುಂದಿದೆ. ವಿಶ್ವದ ಕಡಲೆ ಉತ್ಪಾದನೆಯಲ್ಲಿ ಭಾರತದ ಪಾಲು ಶೇ. ೧೦ರಷ್ಟು(೫.೪ ದಶಲಕ್ಷ ಟನ್). ಕಡಲೆಯಲ್ಲಿ ಎರಡು ವಿಧ. ಒಂದು ದೇಸೀ ಕಡಲೆ,ಎರಡನೆಯದು ಕಾಬೂಲಿ ಕಡಲೆ. ದೇಸೀ ಕಡಲೆಯನ್ನು ಭಾರತ,

ಪಾಕೀಸ್ಥಾನ, ಬಂಗ್ಲಾದೇಶ ಬರ್ಮಾ ಹಾಗೂ ಇಥಿಯೋಪಿಯಾ ಮತ್ತು ಸೂಡಾನ್
ಗಳಲ್ಲೂ, ಅಫ್ಘಾನಿಸ್ಥಾನ ಮತ್ತು ಇರಾನ್‌ನಲ್ಲಿ ದೇಸೀ ಮತ್ತು ಕಾಬೂಲಿ-ಎರಡೂ
ಬಗೆಯ ಕಡಲೆ ತಳಿಗಳನ್ನು ಉಳಿದ ದೇಶಗಳಲ್ಲಿ ಕಾಬೂಲಿ ಕಡಲೆಯನ್ನು ಬೆಳೆಯಲಾ
ಗುತ್ತಿದೆ.

ಭಾರತ್ತದಲ್ಲಿ ಶತಶತಮಾನಗಳ ಇತಿಹಾಸ- ಈ ಬೆಳೆಗೆ ಇದೆ. ಆದರೆ ಸಾಂಪ್ರ
ದಾಯಿಕವಾಗಿ, ಜಮೀನಿನಲ್ಲಿ ಅಲ್ಪಸ್ವಲ್ಪ ತೇವಾಂಶ ಇದ್ದಾಗ ಚಿಲ್ಲರೆ ಬೆಳೆಯಾಗಿ
ಇದನ್ನು ಬೆಳೆಯಲಾಗುತ್ತಿದೆ. ಇತ್ತೀಚಿಗೆ ಕೆಲವು ಸುಧಾರಿತ ತಳಿಗಳೂ ಬಂದಿವೆ.
ಕರ್ನಾಟಕಕ್ಕೆ 'ಅಣ್ಣಿಗೇರಿ-೧' ತಳಿ ಸೂಕ್ತ. ಸಾಂಪ್ರದಾಯಿಕ ತಳಿಗಳು ಜಮೀನಿನಲ್ಲಿ
ಹಾಸಿಕೊಂಡಂತೆ ಒತ್ತಾಗಿ, ಹುಲುಸಾಗಿ ಬೆಳೆದುಬಿಡುವುದರಿಂವ ಸೂರ್ಯನ ಕಿರಣ
ಗಳು ಜಮೀನಿಗೆ ಬೀಳುವುದಿಲ್ಲ. ಈ ಸಾಂಪ್ರದಾಯಿಕ ತಳಿಗಳಿಗೆ ನೀರು ಹಾಯಿಸಿ
ಗೊಬ್ಬರ ನೀಡಿದರೆ ಅತ್ಯಂತ ಹುಲುಸಾಗಿ (ಬೊಚ್ಚು) ಬೆಳೆದು ಉತ್ಪಾದನೆ ಕಡಿಮೆ
ಯಾಗಿಬಿಡುತ್ತದೆ. ಕೆಲವೊಮ್ಮೆ ಯದ್ವಾತದ್ವಾ ಬೆಳೆಯುವುದರಿಂದ ಇಳುವರಿ ಸೊನ್ನೆ
ಯಾದರೂ ಆಗಬಹುದು. ಸಾಲದ್ದಕ್ಕೆ ಕಾಯಿಕೊರೆಯುವ ಹುಳುಗಳ ಹಾವಳಿ,
ಸುರುಟು ಮತ್ತು ಬೇರುಕೊಳೆ ರೋಗಗಳ ಕಾಟ ಬೇರೆ. ಈ ಕಾರಣಗಳಿಂದ
ಹೆಕ್ಟೇರಿಗೆ ಸರಾಸರಿ ೮-೧೦ ಕ್ವಿಂಟಾಲ್ ಇಳುವರಿ ಪಡೆಯುವುದೂ ದುರ್ಲಭ.

ಈ ಎಲ್ಲ ಅಡೆ-ತಡೆಗಳನ್ನು ನಿವಾರಿಸಿ ಸುಧಾರಿತ ಹಾಗೂ ಅಲ್ಪಕಾಲಾವಧಿಯ
ಕಡಲೆ ತಳಿಗಳನ್ನು ರೂಪಿಸಲು ಹೊಸದೆಹಲಿಯ ಭಾರತೀಯ ಕೃಷಿ ಸಂಶೋಧನಾ
ಸಂಸ್ಥೆ (ಪೂಸಾ) ಕಳೆದ ದಶಕದಲ್ಲಿ ಸಾಕಷ್ಟು ಕೆಲಸ ಮಾಡಿದೆ. ಇದು ವಿಶ್ವದ
ಕಡಲೆ ತಳಿಗಳನ್ನೆಲ್ಲಾ ಸೋಸಿ ರಷ್ಯಾ, ಮೆಡಿಟರೇನಿಯನ್ ಹಾಗೂ ಭಾರತದ
ಕಡಲೆ ತಳಿಗಳನ್ನು ಬಳಸಿಕೊಂಡು ಯಾಂತ್ರಿಕವಾಗಿಯೂ ಕುಯಿಲು ಮಾಡಬಲ್ಲ,
ನೆಟ್ಟಗೆ ನಿಲ್ಲುವಂತ ಕಡಲೆ ತಳಿಗಳನ್ನು ರೂಪಿಸಿದೆ. ಈ ಸಂಸ್ಥೆಯ ಶ್ರೀಯುತ ಬೆಹಲ್
ಹಾಗೂ ಇವರ ಸಹೋದ್ಯೋಗಿಗಳು ರೂಪಿಸಿರುವ ಈ ಕಡಲೆ ತಳಿಗಳು ಉತ್ಪಾದನೆ
ಯಲ್ಲಿ ಕ್ರಾಂತಿಕಾರಿ ಬದಲಾವಣೆಯನ್ನು ತರಲಿವೆ. ಸಾಂಪ್ರದಾಯಿಕ ತಳಿಗಳಿಂದ
ಬರುವ ಇಳುವರಿಗಿಂತ ಮೂರು-ನಾಲ್ಕು ಪಟ್ಟು ಹೆಚ್ಚು ಇಳುವರಿಯನ್ನು ಈ ತಳಿ
ಗಳು ನೀಡಬಲ್ಲವು. ಸಾಂಪ್ರದಾಯಿಕ ತಳಿಗಳು ಕೊಡೆಯಂತೆ ನೆಲದಲ್ಲೇ ಹಬ್ಬಿದರೆ
ಈ ಸುಧಾರಿತ ತಳಿಗಳು ಗೋಧಿಯಂತೆ ನೆಟ್ಟಗೆ ಬೆಳೆದು ಕಾಂಡದುದ್ದಕ್ಕೂ ಕಾಯಿ
ಗಳನ್ನು ಹೊತ್ತು ನಿಲ್ಲುತ್ತವೆ. ಸಾಂಪ್ರದಾಯಿಕ ತಳಿಗಳು ಹುಲುಸಾಗಿ ಹರಡಿ
ಕೊಂಡು ಬೆಳೆಯುವುದರಲ್ಲೇ ತಮ್ಮ ಸಾರವನ್ನು ಕಳೆದುಕೊಂಡು, ಕಳೆದುಳಿದ
ಸಾರವನ್ನು ಬಳಸಿಕೊಂಡು ಕಾಯಿಗಳನ್ನು ಬಿಡುತ್ತವೆ. ಸಾಂಪ್ರದಾಯಿಕ ತಳಿಗ
ಳಿಗಿಂತ ಶೇಕಡಾ ೩೦-೫೦ ರಷ್ಟು ಹೆಚ್ಚು ಗಿಡಗಳನ್ನು ಪ್ರತಿ ಹೆಕ್ಟೇರಿನಲ್ಲೂ ಬೆಳೆಯ





ಬಹುದು; ಹೆಕ್ಟೇರಿಗೆ ೪೦-೫೦ ಕ್ವಿಂಟಾಲ್ ಇಳುವರಿ ಪಡೆಯಬಹುದು. ಈ ಇಳು
ವರಿ ಸದ್ಯದ ಸಾಂಪ್ರದಾಯಿಕ ತಳಿಗಳ ಇಳುವರಿಗಿಂತ ಶೇಕಡ ೩೦ ರಷ್ಟು ಹೆಚ್ಚು.
ಸಾಂಪ್ರದಾಯಿಕ ತಳಿಗಳನ್ನು ಅಕ್ಟೋಬರ್ ಕೊನೆಯಲ್ಲಿ ಬಿತ್ತುತ್ತಾರೆ. ಆದರೆ ಈ
ಸುಧಾರಿತ ತಳಿಗಳನ್ನು ನವಂಬರ್ ಮಧ್ಯಭಾಗದಲ್ಲೂ ಬಿತ್ತಬಹುದಾಗಿದೆ.

ಇಂತಹ ಇಪ್ಪತ್ತು ತಳಿಗಳು ದೇಶದಾದ್ಯಂತ ಪ್ರಯೋಗಪರೀಕ್ಷೆಗೊಳಪಟ್ಟಿವೆ.
ಇನ್ನು ಕೆಲವೇ ದಿನಗಳಲ್ಲಿ ವಾಣಿಜ್ಯಶ್ರೇಣಿಯಲ್ಲಿ ಬೆಳೆಯಲು ಇವನ್ನು ಬಿಡುಗಡೆ
ಮಾಡುವ ಸಾಧ್ಯತೆ ಇದೆ. ಈ ಹೊಸ ತಳಿಗಳಿಂದ ಅತ್ಯಧಿಕ ಉತ್ಪಾನೆ ಹಾಗೂ
ಲಾಭ ಪಡೆಯಲು ಬೆಳೆಗೆ ಒಮ್ಮೆ ನೀರು ಹಾಯಿಸಬೇಕಾಗುತ್ತದೆ.

ಕಡಲೆ ಕಡೆಗಣಿಸುವಂಥದ್ದಲ್ಲ. ಇದರಲ್ಲಿ ೨೦.೮ ಗ್ರಾಂ ಪ್ರೋಟೀನ್, ೫.೬
ಗ್ರಾಂ ಕೊಬ್ಬು, ೨.೭ ಗ್ರಾಂ ಖನಿಜ, ೧.೨ ಗ್ರಾಂ ನಾರಿನ ಅಂಶ, ೫೯.೮
ಗ್ರಾಂ ಶರ್ಕರಪಿಷ್ಟ, ೫೬ ಮಿಲಿಗ್ರಾಂ ಸುಣ್ಣ, ೩೩೧ ಮಿಲಿಗ್ರಾಂ ರಂಜಕ, ೯.೧
ಮಿಲಿಗಾಂ ಕಬ್ಬಿಣ, ೧೨೩ ಮಿಲಿಗ್ರಾಂ ಕೆರೋಟಿನ್, ಜೊತೆಗೆ ಥಿಯಾಮಿನ್,
ರಿಬೋಫ್ಲೇವಿನ್, ನಿಯಾಸಿನ್ ಹಾಗೂ "ಸಿ" ಅನ್ನಾಂಗಗಳಿವೆ.

ಪ್ರೋಟೀನ್ ಕೊರತೆಯಿಂದ ಬಳಲುತ್ತಿರುವ ನಮ್ಮ ಜನತೆಗೆ ಈ ಹೊಸ
ತಳಿಗಳು ಉತ್ಪಾದನಾ ಕ್ರಾಂತಿಯನ್ನು ತಂದು ಬಡವನ ಕೈಗೂ ನಿಲುಕುವಂತೆ ಬೆಲೆ
ಗಳಿಳಿದು (ಕಬ್ಬಿಣದ ಕಡಲೆಯಾಗದೆ) ಬೇಳೆಯ ಬರವನ್ನು ಹರಿಸಬಲ್ಲವೆಂದು ಕೃಷಿ
ವಿಜ್ಞಾನಿಗಳ ನಿರೀಕ್ಷೆ. ಆರುಕಾಸಿನ ಕಾಲ ಬರದಿದ್ದರೂ ಅರವತ್ತು ಪೈಸೆಗಾದರೂ
ಬಡವನೊಬ್ಬ ಮೆಲುಕುಹಾಕಬಲ್ಲ. ಕಡಲೆಯಾದರೂ ಸಿಗಲೆಂದು ಆಶಿಸೋಣ.
ಈ ಕೃಷಿ ವಿಜ್ಞಾನಿಗಳ ನಿರೀಕ್ಷೆ ಹಾಗೂ ಬಡವನ ಆಸೆ ರೈತನನ್ನಾಶ್ರಯಿಸಿದೆ ಎಂದು
ಮತ್ತೆ ಒತ್ತಿ ಹೇಳಬೇಕಾಗಿಲ್ಲ. ●

## ಊಟ ಬಲ್ಲವನಿಗೆ ರೋಗವಿಲ್ಲ

ಬೀಡಿ ಸಿಗರೇಟ್ ಚುಟ್ಟ ಕಾಫಿ-ಟೀ ದುಶ್ಚಟವು
ಕಾಡುತಿದೆ ಹಗಲಿರುಳು ಕುಡಿತ ಮುಂತಾಗಿ
ನೋಡಿ ದೂರೀಕರಿಸಿ ಕೂಡಿಕೊಳ್ಳದೆ ಇರಲು
ರೂಢಿಯೊಳು ದಿವ್ಯಾತ್ಮ—ಧನ್ವಂತರಿ

ದಿನಕೊಂದು ಸೇಬನ್ನು ಧನವನೆಣಿಸದೆ ಸವಿಯೆ
ವಿನಯದಿಂ ವೈದ್ಯನನು ದೂರವಿಡಬಹುದು
ಮನುಮುನಿಯು ಬರೆದಿಹುದ ಅನುನಯದಿ ಆಚರಿಸೆ
ತನುವಿಗೆಲ್ಲಿಯ ರೋಗ—ಧನ್ವಂತರಿ

# ವಿಚಾರವಂತ ಬಸವಣ್ಣನವರು



(ಭೋ-ಷ||)

ಜಗದ-ಜ್ಯೋತಿ ನೀನೆ ಅಣ್ಣ
ಹಗಲು-ಇರುಳು ನೆನೆಯುತಿರುವೆ
ಮಗುವುಯೆಂದೆ ಬಗೆದು ಅರಿವನಿತ್ತು ಸಲವು ನೀ ।
ಚಿಗುರಿಸಿದೆಯೊ ಲೋಕವೃಕ್ಷ
ಜಗುಳಿದಾಗ ಮೂಢಮತಿಯ
ಟಗರ ಕಾಳಗವನು ಕಳೆದು ಬಟ್ಟೆದೋರಿದೆ ||೧||

ಯಜ್ಞಯಾಗ ಮಾಡಬೇಡಿ
ಅಜ್ಞ ಜನರ ಕಾಡಬೇಡಿ
ಸುಜ್ಞ ವಿಷಯ ತಿಳಿಯಿರೆಂದು ಮನವಿ ಮಾಡಿದೆ ।
ತಜ್ಞರೊಂದುಗೂಡಿ ಬಳಿಕ
ಪ್ರಜ್ಞೆಯಿಂದ ಚರ್ಚೆ ಮಾಡಿ
ತಜ್ಞತೆಯನು ಜಗಕೆ ಸಾರಲನುವ ಮಾಡಿದೆ ||೨||

ಕಳವು ಕೊಲೆಯು ಹುಸಿಯು ಬೇಡ
ಸುಲಿಗೆ ಮೇಣಸಹನೆ ಗರ್ವ
ಹಳಿದು ಯಾರ ನೋಯಿಸುವುದು ಕೂಡದೆಂದೆ ನೀ ।
ಕುಳಿತು-ಉಂಬ ಹುಂಬತನವು
ಗಳಿಕೆಯಿಂದ ತೊಲಗಲೆಂಬ
ಸುಳುಹುದೋರಿ ಕಾಯಕವನು ತತ್ತ್ವವೆನಿಸಿದೆ ||೩||

ಸಕಲಜೀವ-ದಾತ್ಮಗಳಿಗೆ
ಶಕುತಿಯೀವ ಲೇಸ ಬಯಸಿ
ಚಕಿತಗೊಳಿಸಿ ವಿಶ್ವವನ್ನೆ 'ಬಂಧು' ವಾದೆಯೈ ।
ಬಕುತಿ-ಭಾವ ತುಂಬಿ ತುಳುಕಿ
ಶಕುನಗಳನು ದೂರಮಾಡಿ
ಕುಕಿಲಸರದಿ ವಚನ ಹಾಡಿ ತಣಿದು ತಣಿಸಿದೆ ||೪||

— ಕೆ. ಪಿ. ಶಿವಲಿಂಗಯ್ಯ

ತ್ತೇವೆ. "ಸತಿಯರು ಮನೆಮನೆಗೆ ಒನಕೆವಾಡಂ ಪಾಡುವರು" ಎಂದಿದ್ದಾನೆ ಭೀಮಕವಿ. ಇಲ್ಲಿ 'ದೇಸಿ' 'ಮಾರ್ಗ' ಸಂಗೀತಗಳ ಪ್ರಸ್ತಾಪವೂ ಇರುವುದನ್ನು ಗಮನಿಸುತ್ತೇವೆ.

[ ೨ ]

ಕರ್ನಾಟಕದ ಜನ ಎಂದಿನಿಂದಲೂ ಸಂಗೀತಪ್ರಿಯರು. ಪಂಪಕವಿ ಆಡಿದ ಮಾತು "ಚಾಗದ ಭೋಗದ, ಗೇಯದ.......ಮಾನಿಸರೆ ಮಾನಿಸರ್" ಎಂಬುದು, "ಇಂಪನಾಳ್ದ ಗೇಯಂ ಕಿವಿಪೊಕ್ಕೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ"— ಎಂಬುದು ಕನ್ನಡಿಗರ ಸಾಂಸ್ಕೃತಿಕ ಜೀವನದ ಮನೋಧರ್ಮವನ್ನು ಸೂಚಿಸುತ್ತವೆ. ಸಂಗೀತವನ್ನು ಕೇಳುವುದು, ಕನ್ನಡಿಗರ ಮನೋಧರ್ಮ. ಶಿವಶರಣರ ಪೂರ್ವದಲ್ಲಿಯೂ ಅನೇಕ ಸಂಗೀತಗಾರರ ಹೆಸರುಗಳು ನಮಗೆ ದೊರೆಯುತ್ತವೆ. 'ಶಾಂತರ' ಎಂಬ ದೊರೆಯು ಸಂಗೀತದಲ್ಲಿಯೂ ಚತುರನಾಗಿದ್ದನು. 'ಪಿರಿಯಕೇತಲದೇವಿ' ಎಂಬವಳಿಗೆ 'ಸಂಗೀತ ವಿದ್ಯಾಧರಿ' ಎಂದು ಕರೆಯುತ್ತಿದ್ದರು. ಗಂಗಪೆರ್ಮಾಡಿಯ ಪತ್ನಿ 'ಬಾಚಲದೇವಿ' ಸಂಗೀತ ವಿದ್ಯೆಯಲ್ಲಿ ಅಸಮಾನಳು ಎಂದು ವರ್ಣಿತವಾಗಿದೆ. ಸಾಮಂತನಾದ ಎರೆಯಪ್ಪ(ಮ್ಮ)ನು 'ವಾದ್ಯವಿದ್ಯಾಧರನೂ' 'ಸಕಳಕಳಾಧರನೂ' ಆಗಿದ್ದನು. ವಿಷ್ಣುವರ್ಧನನು 'ಸಂಗೀತ-ಪ್ರಸಂಗಭಂಗೀ ಸಂಗತ-ಚತುರಭರತ'ನಾಗಿದ್ದನು. ಈ ಹೆಸರುಗಳನ್ನು ನೋಡಿದರೆ ಶಿವಶರಣರ ಪೂರ್ವದಲ್ಲಿಯೂ, ಸಂಗೀತವು ಪರಂಪರಿತವಾಗಿ ಈ ನಾಡಿನಲ್ಲಿ ಬೆಳೆದುಬಂದಿದೆಯೆಂಬುದು ಗೋಚರಿಸುತ್ತದೆ.

[ ೩ ]

ಕನ್ನಡ ಸಾಹಿತ್ಯಕ್ಕೆ ಸಂಗೀತದ ಮೆರುಗು ಕೊಟ್ಟು, ಜನತೆಯ ಮನೆಮನೆಗೂ ವಚನಗಳನ್ನು ಮುಟ್ಟಿಸಿದ ಕೀರ್ತಿ ವಚನಕಾರರಿಗೆ ಸಲ್ಲುತ್ತದೆ. ವಚನಗಳನ್ನು ಹಾಡುವ ಪರಂಪರೆಯೇ ಏರ್ಪಟ್ಟು, ಅವುಗಳಿಗೆ ರಾಗ, ತಾಳಗಳನ್ನೂ ಸೂಚಿಸುತ್ತಿದ್ದುದಕ್ಕೆ ಉದಾಹರಣೆಗಳು ಹರಿಹರ, ರಾಘವಾಂಕ, ಭೀಮಕವಿ ಇವರಲ್ಲಿ ದೊರೆಯುತ್ತವೆ. ಬಸವಣ್ಣನವರು ವಚನಗಳನ್ನು ಹಾಡಿದರು 'ತಾಳ, ಮಾನ, ಓಜೆ, ಬಜಾವಣೆಗಳ ಲೆಕ್ಕ ಭಕ್ತಿಯ ಹಾಡಿಗೇಕೆ' ಎಂದು ಒಂದು ವಚನದಲ್ಲಿ ಹೇಳಿದ್ದಾರೆ. ಇನ್ನೊಂದು ವಚನದಲ್ಲಿ 'ದಂಡಿಗೆ' 'ಸೋರೆ' 'ತಂತಿ' 'ಕಡ್ಡಿ' 'ಬತ್ತೀಸರಾಗ' ಮೊದಲಾದವುಗಳನ್ನು ಉಲ್ಲೇಖಿಸಿದ್ದಾರೆ. 'ಕೂಡಲಸಂಗನ ಶರಣರ ಕಂಡು, ಆಡಿ ಹಾಡಿ ಬದುಕು' ಎಲೆ ಮನವೇ ಎಂದಿದ್ದಾರೆ. 'ಆಡದೆ ನವಿಲು ? ಹಾಡದೆ ತಂತಿ ?' ಎಂದು ಮತ್ತೊಂದು ವಚನದಲ್ಲಿ ನುಡಿದಿದ್ದಾರೆ. ಭಕ್ತಿಯಿಲ್ಲದೆ ಹಾಡಿದಹಾಡು, ತಂತಿಯ ಮಿಡಿತ, ನವಿಲಿನ ಕುಣಿತ, ಇಕ್ಕುಳದ ಕೈಮುಗಿತಕ್ಕೆ ಸಮಾನವೆಂದಿದ್ದಾರೆ. ಅವರು ಹಾಡಿದುದು ಕೇಡಿಲ್ಲದ ಪದವಿಯನ್ನೀವ ಭಕ್ತಿಯ ಹಾಡು. ಅಲ್ಲಮಪ್ರಭುದೇವನೂ 'ಎರಡೆಂಬತ್ತು ಕೋಟಿ ವಚನವ ಹಾಡಿ'ದನೆಂದು ತಿಳಿಸಿದ್ದಾನೆ. ಅಲ್ಲದೆ ಅಲ್ಲಮನು ಅನೇಕ ಹಾಡುಗಳನ್ನು ಬರೆದು ಅವುಗಳಿಗೆ ಹಾಡಲು ಅನುಕೂಲವಾಗುವಂತೆ ರಾಮಕ್ರೀ, ಮಾಳವ



ಗೌಳ ಮಧುಮಾಧವಿ, ದೇಶಾಕ್ಷಿ, ಗೌಳ, ಧನ್ಯಾಸಿ, ಭೌಳಿ, ನಾಟಿ–ಮೊದಲಾದ ರಾಗಗಳ ಹೆಸರುಗಳನ್ನೂ ಸೂಚಿಸಿದ್ದಾನೆ. ಅಲ್ಲದೆ ಹರೀಶ್ವರ ಕವಿಯು ಪ್ರಭುದೇವರ ರಗಳೆಯಲ್ಲಿ ಅವನನ್ನು ವರ್ಣಿಸುವಾಗ :

"ಇಂತು ಬಳೆಯಲ್ ಬಳೆದುದಾತನೊಡನನೆ ವಿದ್ಯೆ ;
ಸಂತತಂ ಸೊಗಯಿಪ ಮೃದಂಗದ ಮಹಾವಿದ್ಯೆ ;
ಆ ವಿದ್ಯೆಯೊಡನೆ ಯೌವನವೊಸೆದು ಬಳೆಯುತಿರೆ ;"

ಎಂದು ಅಲ್ಲಮನೊಡನೆಯೆ 'ಮೃದಂಗ' ಬಾರಿಸುವ ಕಲೆಯೂ ಬೆಳೆಯಿತೆಂದು ಕವಿ ಹರಿಹರದೇವನು ವರ್ಣಿಸಿದ್ದಾನೆ. ಗೊಗ್ಗೇಶ್ವರಾಲಯಕ್ಕೆ ಬಂದು "ಮೃದಂಗಮುಂ ಇಕ್ಕೆಲದೊಳುಂ ನಿರಿಸಿ, ಸಿಂಗರಿಸಿ, ರಂಗಬೊಕ್ಕು ಮೇಳೈಸಿ, ಅತಿರಸಾಮೃತ, ಕಾಂತಿಯುತ, ನುತಗತಿ, ನವೀನಗತಿ, ರಸಗತಿ, ಸುಣ್ಗತಿ, ಗಂಭೀರಗತಿ, ಸಾಂದ್ರಗತಿ, ಜಾಣ್ಗತಿ, ಮಧುರಗತಿ, ಮನೋಹರಗತಿ, ಸುಗತಿಗಳನ್ನು"–ಶಂಕರನಿಗೆ ಕರ್ಣಾಭರಣವಾಗುವಂತೆ ಬಾರಿಸಲು ಕುಳಿತು ಕೇಳಿದ ಜನ, ವಂದಿ ಮಾಕಾಳರು ತಲೆದೂಗುತ್ತಾರೆ! ಮುರಜದ ಗತಿಗೆ ಮಾರುಹೋದವಳಲ್ಲಿ ಕಾಮಲತೆಯೂ ಒಬ್ಬಳು ಎಂದಿದ್ದಾನೆ ಹರಿಹರ ಕವಿ. ಚಾಮರಸನ ಪ್ರಭುಲಿಂಗಲೀಲೆಯಲ್ಲಿ ಅಲ್ಲಮನು ಮದ್ದಳೆ ಬಾರಿಸುತ್ತಿದ್ದರೆ ಮಾಯಾದೇವಿ 'ಕಾರಮುಗಿಲಿನ ಗರ್ಜನೆಯ ಕೇಳಿ ನಲಿದು, ನಟಿಸುವ ಸೋಗೆ ನವಿಲಂತೆ ನಟಿಸುತ್ತಾಳೆ' ಎಂದು ವರ್ಣಿಸಲಾಗಿದೆ. ಈ ಎರಡು ಕಾವ್ಯಗಳಲ್ಲಿ ಅಲ್ಲಮಪ್ರಭುವನ್ನು ಮದ್ದಳೆಯಲ್ಲಿ ನುರಿತ ಕಲಾವಿದನೆಂದು ವರ್ಣಿಸಲಾಗಿದೆ. ಬಸವಣ್ಣನಂತೆ ಅಲ್ಲಮನೂ ಶ್ರೇಷ್ಠ ಸಂಗೀತಗಾರನಿದ್ದುದು ಸುಸ್ಪಷ್ಟ. ಪ್ರಸಿದ್ಧಯೋಗಿ ಸಿದ್ಧರಾಮನು ತನ್ನೊಂದು ವಚನದಲ್ಲಿ "ಅಱುವತ್ತೆಂಟುಸಾವಿರ ವಚನಂಗಳ ಹಾಡಿ ಹಾಡಿ ಸೋತಿತೆನ್ನ ಮನ ನೋಡಯಾ" ; ಎಂದು ನುಡಿದಿದ್ದಾನೆ. ಗಜೇಶಮಸಣಯ್ಯನೆಂಬ ವಚನಕಾರನು, 'ದೇಶಾಕ್ಷಿಯಿಲ್ಲದ ರಾಗ ಉಪ್ಪಿಲ್ಲದೂಟ ಸಪ್ಪೆ ಕಾಣಿರಣ್ಣಾ'–ಎಂದಿದ್ದಾನೆ. ಇದು ಅವನಿಗೆ ದೇಶಾಕ್ಷಿರಾಗದ ಮೇಲಿದ್ದ ಮಮತೆಯನ್ನು ತೋರಿಸುತ್ತದೆ. ಹೀಗೆ ವಚನಕಾರರಲ್ಲನೇಕರು ಸಂಗೀತ ವಿದ್ಯೆಯಮೇಲಿದ್ದ ತಮ್ಮ ಪ್ರೀತಿಯನ್ನು ವ್ಯಕ್ತಪಡಿಸಿದುದು ಮಾತ್ರವಲ್ಲ, ಅವರು ಸ್ವತಃ ಸಂಗೀತಗಾರರಿದ್ದು ಅದನ್ನು ಪ್ರದರ್ಶಿಸುತ್ತಿದ್ದರೆಂದೆನಿಸುತ್ತದೆ. ಢಕ್ಕೆಯ ಮಾರಯ್ಯ, ಕಿನ್ನರಿಯ ಬ್ರಹ್ಮಯ್ಯ, ಸಕಳೇಶ ಮಾದರಸರು ಸಂಗೀತದಲ್ಲಿ ಬಲ್ಲಿದರಾಗಿದ್ದರು. ಕಿನ್ನರಿಯ ಬ್ರಹ್ಮಯ್ಯನು ಕಿನ್ನರಿ ನುಡಿಸುವಲ್ಲಿ, ಸಕಳೇಶ ಮಾದರಸನು ವೀಣೆ ನುಡಿಸುವಲ್ಲಿ ಖ್ಯಾತರಾಗಿದ್ದರು. ಭೀಮಕವಿಯ ಬಸವಪುರಾಣದಲ್ಲಿ ಮಾದರಸರ ವೀಣಾವಾದನದ ವಿಷಯದಲ್ಲಿ ಹೀಗೆ ಬರೆಯಲಾಗಿದೆ.

"ನಾದ ವಿದ್ಯಾಪಂಡಿತಂ, ಸಕಳ ವೀಣಾದಿ ಕಳಾವಿದಂ, ಭರತಾದಿಶಾಸ್ತ್ರ ವಿಚಕ್ಷಣಂ". "ಬತ್ತೀಸಾದಿ ರಾಗಗಳಿಂ ದಂಡಿಗೆಗಳಂ ರಚಿಸಿ, ಪ್ರಿಯವಾದ ವೀಣೆ ಮೊರೆಯಲು ಪ್ರಸ್ತುತವನರಿದು, ಕ್ಷೋಣಿಯೊಳು ಹೆಸರುಳ್ಳ ರಾವಳವೀಣೆ, ಪಾರಣಹಸ್ತ,



## ವಿಚಾರವಂತ ಬಸವಣ್ಣನವರು

(ಭೋ-ಷ||)

ಜಗದ-ಜ್ಯೋತಿ ನೀನೆ ಅಣ್ಣ
ಹಗಲು-ಇರುಳು ನೆನೆಯುತಿರುವೆ
ಮಗುವುಯೆಂದೆ ಬಗೆದು ಅರಿವನಿತ್ತು ಸಲವು ನೀ ।
ಚಿಗುರಿಸಿದೆಯೊ ಲೋಕವೃಕ್ಷ
ಜಗುಳಿದಾಗ ಮೂಢಮತಿಯ
ಟಗರ ಕಾಳಗವನು ಕಳೆದು ಬಟ್ಟೆದೋರಿದೆ ||೧||
ಯಜ್ಞಯಾಗ ಮಾಡಬೇಡಿ
ಅಜ್ಞ ಜನರ ಕಾಡಬೇಡಿ
ಸುಜ್ಞ ವಿಷಯ ತಿಳಿಯಿರೆಂದು ಮನವಿ ಮಾಡಿದೆ ।
ತಜ್ಞರೊಂದುಗೂಡಿ ಬಳಿಕ
ಪ್ರಜ್ಞೆಯಿಂದ ಚರ್ಚೆ ಮಾಡಿ
ತಜ್ಞತೆಯನು ಜಗಕೆ ಸಾರಲನುವ ಮಾಡಿದೆ ||೨||
ಕಳವು ಕೊಲೆಯು ಹುಸಿಯು ಬೇಡ
ಸುಲಿಗೆ ಮೇಣಸಹನೆ ಗರ್ವ
ಹಳಿದು ಯಾರ ನೋಯಿಸುವುದು ಕೂಡದೆಂದೆ ನೀ ।
ಕುಳಿತು-ಉಂಬ ಹುಂಬತನವು
ಗಳಿಕೆಯಿಂದ ತೊಲಗಲೆಂಬ
ಸುಳುಹುದೋರಿ ಕಾಯಕವನು ತತ್ತ್ವವೆನಿಸಿದೆ ||೩||
ಸಕಲಜೀವ-ದಾತ್ಮಗಳಿಗೆ
ಶಕುತಿಯೀವ ಲೇಸ ಬಯಸಿ
ಚಕಿತಗೊಳಿಸಿ ವಿಶ್ವವನ್ನೆ 'ಬಂಧು' ವಾದೆಯ್ಯೆ ।
ಬಕುತಿ-ಭಾವ ತುಂಬಿ ತುಳುಕಿ
ಶಕುನಗಳನು ದೂರಮಾಡಿ
ಕುಕಿಲಸರದಿ ವಚನ ಹಾಡಿ ತಣಿದು ತಣಿಸಿದೆ ||೪||

— ಕೆ. ಪಿ. ಶಿವಲಿಂಗಯ್ಯ

## ಸಂಗೀತಕ್ಕೆ ಶಿವಶರಣರ ಕೊಡುಗೆ

—ಪ್ರೊ|| ಮಲ್ಲಿಕಾರ್ಜುನ ಮನಸೂರ್

ಕನ್ನಡನಾಡಿನ ಶಿವಶರಣರು ಸಾಹಿತ್ಯ, ಸಂಗೀತ, ನೃತ್ಯ, ನಾಟಕಗಳ ಮೂಲಕ
ಈಶ್ವರ ಸೇವೆ ಸಲ್ಲಿಸಿ, ಭಕ್ತರನ್ನು ತಣಿಸಿ, ಇಹಪರಗಳಿಗೂ ಪೂಜ್ಯರಾಗಿದ್ದಾರೆ. ಅವರು
ಆಶ್ರಯಿಸಿದ್ದು ಜನತೆಯನ್ನು ; ಆದುದರಿಂದ ಜನತೆಯ ಭಾಷೆಯನ್ನು ಸಾಹಿತ್ಯಕ್ಕೆ
ಬಳಸಿದಂತೆ, ಜನತೆಯ ಕಲೆಗಳಾದ ಹಾಡು, ಕುಣಿತಗಳನ್ನು, ವೇಷಗಳನ್ನು ಭಕ್ತಿಯ
ಕಾಯಕಗಳನ್ನಾಗಿ ಪರಿವರ್ತಿಸಿಕೊಂಡು ಈಶ್ವರಾನುಗ್ರಹ ಸಂಪಾದಿಸಿದರು. ಅವರು
ಈ ಕಲೆಗಳನ್ನು ಬಳಸಿದ್ದು, ಬೆಳೆಸಿದ್ದು ಉದರಪೋಷಣೆಗೆ ಮಾತ್ರವಲ್ಲ ; ದೈವದತ್ತ
ಶಕ್ತಿಯಾದ ಕಲಾಪ್ರತಿಭೆಯನ್ನು ಸಮಾಜೋದ್ಧಾರ, ಲೋಕಕಲ್ಯಾಣಕ್ಕಾಗಿ, ಅದ
ರಿಂದಾಗಿ ದೈವದ ಪೂಜೆಗೆಂದು ಅವುಗಳನ್ನು ಬಳಸಿಕೊಂಡುದು ಗೋಚರಿಸುತ್ತದೆ.
ಕಾವ್ಯಕಲೆಯನ್ನೂ ವೀರಶೈವ ಶರಣರು 'ನರಸ್ತುತಿಗೆ' 'ಉದರಪೋಷಣೆ'ಗೆ, 'ಕೀರ್ತಿ
ವಾರ್ತೆ ಲಾಭ'ಗಳಿಗೆ ಬಳಸಿಲ್ಲ. ಈ ತತ್ವವೇ ಇತರ ಕಲಾವಿದರಿಗೂ ಅನ್ವಯಿಸುತ್ತದೆ.
ಕಲಾವಿದರಲ್ಲಿ ಕವಿಗಳು ಮತ್ತು ವಚನಕಾರರಾದ ಶಿವಶರಣರು ಇದ್ದಾರೆ. 'ದೇಶಿ'
ಮತ್ತು 'ಮಾರ್ಗ' ಎರಡರಲ್ಲಿಯೂ ಅವರ ಕೊಡುಗೆ ಮಹತ್ತರವಾದುದು. ಇವರ
ಕಲಾಭಿರುಚಿ ನೃತ್ಯದಲ್ಲಿಯೂ, ನಾಟಕದಲ್ಲಿಯೂ ಕಂಡುಬರುತ್ತದೆ. ಕಲೆಗಳನ್ನು
ಪ್ರಯೋಗಗಳ ಮೂಲಕ ಪ್ರದರ್ಶಿಸುತ್ತಿದ್ದುದು ಮಾತ್ರವಲ್ಲದೆ ಕೆಲವರು ಈ ಬಗೆಗೆ
ಶಾಸ್ತ್ರಗ್ರಂಥಗಳನ್ನೂ ರಚಿಸಿದ್ದಾರೆ. ಶರಣರು ರಚಿಸಿದ 'ವಚನ', 'ಗೀತ', 'ಜಾನ
ಪದ ಹಾಡು', 'ಒನಕೆವಾಡು', 'ಯಕ್ಷಗಾನ', 'ಸಣ್ಣಾಟ'(ಶರಣರಾಟ)—ಇವೆಲ್ಲವು
ಗಳನ್ನು ಹಾಡುವುದು ಒಂದು ರೀತಿಯಲ್ಲಿ 'ಜಾನಪದ ಸಂಗೀತ'ಕ್ಕೆ ಕೊಟ್ಟ ಕೊಡುಗೆ
ಯೆಂದೇ ಹೇಳಬೇಕು. ಶಿವಶರಣರ ಕಥೆಗಳನ್ನು ನಾಡಿನಲ್ಲಿ ಹಲವು ಕಲಾಮಾಧ್ಯಮದ
ಮೂಲಕ ಪ್ರಸಾರಮಾಡುತ್ತಿದ್ದರೆಂಬುದಕ್ಕೆ ಬಸವಪುರಾಣದ ಈ ಕೆಳಗಿನ ಪದ್ಯವನ್ನು
ನೋಡಬಹುದು. ಸಿರಿಯಾಳ ಸೆಟ್ಟಿಯಿಂದಲೇ ಶಿವಭಕ್ತಿ ಹುಟ್ಟಿತಂತೆ. "ಇಳೆಯೊಳಾ
ಸಿರಿಯಾಳ ಸೆಟ್ಟಿಯ ತಲೆಯಲೇ ಶಿವಭಕ್ತಿ ಹುಟ್ಟಿತು" ; ಸರಸ ಭಾಷಾಂಗ ಕ್ರಿಯಾಂ
ಗೋತ್ಕರದ ನಾಟಕ ಗದ್ಯಪದ್ಯವಿಸರ ಮಧುರ ಗೀತೋಕ್ತಿಯಿಂ, ಸಲೆ ದೇಶದೇಶದಲಿ,
ಕರಂ ಎಸೆಯಲು ಊರ್ಜೂರೊಳು ಅತಿಶುಭಕರಮೆನಲು ಸಿರಿಯಾಳ ಚರಿತೆಯನೊರೆ
ದೊರೆದು ವಿರಚಿಪರು ಭಕ್ತಸಭಾಂತರಾಳದೊಳು". ಸಿರಿಯಾಳನ ಕಥೆ ಎಷ್ಟೊಂದು
ಜನಪ್ರಿಯವಾಗಿತ್ತೆಂಬುದನ್ನು, ಆ ಕಥೆಯನ್ನು ಜನರಲ್ಲಿ ಪ್ರಸಾರಮಾಡಲು ಕಾವ್ಯ,
ನಾಟಕ, ಗದ್ಯಪದ್ಯ, ಮಧುರ ಗೀತೋಕ್ತಿಗಳನ್ನು ಬಳಸಿದುದನ್ನು ನಾವಿಲ್ಲಿ ಕಾಣು

ಗೌರೀವೀಣೆ, ಕಿನ್ನರವೀಣೆ, ತಚ್ಛಪವೀಣೆ, ಕೈಲಾಸವೀಣೆ, ತುಂಬುರವೀಣೆ, ಪದ್ಮಜ
ವೀಣೆ, ಸಾಯಂಭುವೀಣೆ, ಸಾರಂಗವೀಣೆ, ಪಿನಾಕವೀಣೆ—ಇವು ಮೊದಲಾದುವು
ಗಳಿಂದ, ಮೇಘಚಾಳ, ಯೌತಾಣಮಾನಿತ, ನವತಾಣ, ಸಂಧಾನ, ಅಮರ, ತಾಳ
ಪಾತ್ಯ, ಮೊದಲಾದುವುಗಳನ್ನು ನಾದಮೂರ್ತಿ ಶಿವನೇ ಕೇಳೆಂದು ನುಡಿಸುತ್ತಿದ್ದನು.
ಸಪ್ತಸ್ವರಗಳಲ್ಲಿ, ಇಪ್ಪತ್ತೆರಡು ಶ್ರುತಿಗಳಲ್ಲಿ, ನಾರಾಟ ಕಾವುಳವೆಂಬ ಧ್ವನಿಗೂಡಿ,
ಚಾಕುಳವೆಂಬ ಸುಗತಿಯಿಂದ ಅನುಬದ್ಧಗೂಡಿ, ಗಮಕಸಪ್ತಕದಲ್ಲಿ, ಮಂಧ್ರ
ಮಾಧ್ಯಮ ಮತ್ತು ತಾರಸ್ವರದಲ್ಲಿ ಶುದ್ಧಸಾಳಗದ ದೇಶಿ ಮಾರ್ಗದಲ್ಲಿ ನುಡಿಸುತ್ತಿ
ದ್ದನು. ಅಲ್ಲದೆ ಪ್ರಸಿದ್ಧವಾದ ಮಲಹರಿ, ಲಲಿತೆ, ಧನ್ಯಾಸಿ, ಮಂಗಳಕಾಶಿ, ದೇಶಾಕ್ಷಿ,
ಕುರುಜೆ, ಗುಜ್ಜರಿ, ದೇಶಿ, ವೇಳಾಪುರಿ ಮೊದಲಾದ ರಾಗಗಳಲ್ಲದೆ ಪುರುಷರಾಗ
ಗಳನ್ನು ಗೀತರೂಪದಲ್ಲಿ ವಾದ್ಯದಲ್ಲಿ ನುಡಿಸುತ್ತಿದ್ದನು. ಇವೆಲ್ಲ, ಭಕ್ತಿಯಿಂದ ಶಿವ
ನನ್ನು ಹಾಡುವ ಹಾಡುಗಳು. ಕಿನ್ನರಿ ಬ್ರಹ್ಮಯ್ಯನು ಕಿನ್ನರಿವೀಣೆ ನುಡಿಸುತ್ತಿದ್ದು
ಶಿವನು 'ಸುನಾದರಸಲೋಲ'ನಾಗಿ ಒಂದು 'ಹೊನ್ನು' ಒಂದು 'ಹಣ' ಒಂದು'ಹಾಗ'
ಕರುಣಿಸುತ್ತಿದ್ದನಂತೆ ! ಸಂಗೀತವು ಶರಣರಿಗೆ ಶಿವನನ್ನೊಲಿಸುವ ಸಾಧನವಾಗಿ
ದ್ದಿತು. 'ರಾಗದ ಸಂಕಣ್ಣ' ನೆಂಬುವನು ಸಂಗೀತದಿಂದಲೇ ಪ್ರಸಿದ್ಧನಾಗಿದ್ದನು.
ಅವನ ಹೆಸರೇ ಅದನ್ನು ಸೂಚಿಸುತ್ತದೆ. ಕಲ್ಯಾಣದ ಚಾಳುಕ್ಯಚಕ್ರವರ್ತಿ ವಿಕ್ರಮಾ
ದಿತ್ಯನ ಆಸ್ಥಾನದಲ್ಲಿ ವಿದ್ವಾಂಸನೀತ. ಆಸ್ಥಾನದಲ್ಲಿ ನಿತ್ಯವೂ ಹಾಡಿ ಎರಡು ವರಹ
ಗಳನ್ನು ಪಡೆಯುತ್ತಿದ್ದನಂತೆ. ಸಂಕಣ್ಣನ ಸಂಗೀತವು ಭಕ್ತಿಯ ಕಂಪುಗೂಡಿರು
ತ್ತಿತ್ತು. ಈತನು ಗೌಳ ದೇಶದ ಗಾಯಕನೊಡನೆ ಗೆದ್ದುದರಿಂದ ದೊರೆಯು ಈತ
ನಿಗೆ 'ರಾಗರಸಾಂಕ' ಎಂಬ ಬಿರುದು ಕೊಟ್ಟಿದ್ದಾನೆ. ಅನೇಕ ಶಿವಶರಣರ ವಚನ
ಗಳಿಗೆ ರಾಗ ನಿರ್ದೇಶನಗಳು ದೊರೆಯುತ್ತವೆ. 'ಅಲ್ಲಮನ ವಚನ ಚಂದ್ರಿಕೆ'; 'ಶಿವ
ದಾಸ ಗೀತಾಂಜಲಿ' ಗಳಲ್ಲಿ ಇದಕ್ಕೆ ಹೇರಳ ಉದಾಹರಣೆಗಳನ್ನು ಕಾಣುತ್ತೇವೆ.

[ ೪ ]

ಮಹಾಕವಿ ಹರಿಹರನು ಸಂಗೀತ ಕಲೆಯನ್ನು ಚೆನ್ನಾಗಿ ಅರಿತಿದ್ದನೆಂಬುದನ್ನು
ಆತನ ಕಾವ್ಯಗಳ ಅಧ್ಯಯನದಿಂದ ಕಾಣುತ್ತೇವೆ. ಅವನು ಶರಣರ ಕಥೆಗಳನ್ನು
ವಿವರಿಸುವಾಗ ಶರಣರು ಗೀತಗಳನ್ನು ಹಾಡುತ್ತಿದ್ದುದನ್ನು ಪ್ರಸ್ತಾಪಿಸುತ್ತಾನೆ. ಕವಿ
ಹರಿಹರದೇವನು ರಗಳೆಗಳಲ್ಲಿ ಶರಣರ ಕಥೆಗಳನ್ನೇ ಹಾಡುತ್ತಿದ್ದನೆಂದು ಹೇಳಿದ್ದಾನೆ.
"ಲಲಿತ, ಬಂಗಾಳದಿಂದೊಲಿದು, ಮಲಹರಿ, ವರಾಳಿಯಿಂದೊಲಿದು, ದೇಶಿಗುಜ್ಜರಿಗ
ಳಿಂದ, ದೇಶಾಕ್ಷಿ, ಗೌಳಗಳಿಂದ" –ಹೀಗೆ 'ಬತ್ತೀಸ ರಾಗ'ದಿಂದ ಈಶ್ವರನನ್ನು ಹಾಡು
ತ್ತಾನೆಂದು ಹೇಳಿದ್ದಾನೆ. ರಗಳೆಯ ಮುಖ್ಯ ಲಕ್ಷಣಗಳಲ್ಲೊಂದು 'ತಾಳ' ಸಂಗೀ
ತಕ್ಕೊ ಇದು ಮುಖ್ಯವಾಗಿದೆ. ಹರೀಶ್ವರ ಕವಿಯು ಹಲವಾರು ಕೃತಿಗಳಲ್ಲಿ ತನಗಿದ್ಧ
ಸಂಗೀತದ ಅಭಿರುಚಿಯನ್ನು ವ್ಯಕ್ತಪಡಿಸಿದ್ದಾನೆ. ಆನಯನಾರರ ರಗಳೆಯಲ್ಲಿ, ಆ



ಶರಣನು ದನಗಾಹಿಯಾಗಿದ್ದರೂ ಅವನು ಮಹಾಭಕ್ತನಾಗಿದ್ದನು. ದನಗಳನ್ನು
ಒಟ್ಟುಗೂಡಿಸಿಕೊಂಡು, ಶಿವನ ಕಿವಿಗೆ ಸವಿದನಿಯನೀವಂತೆ ರಾಗರಸದೊಳಗೆ ಪಂಚಾ
ಕ್ಷರಿಗಳನ್ನು ತನ್ನ ಕೊಳಲಿನಿಂದ ನುಡಿಸುತ್ತಿದ್ದನು. ಆ ನಾದಕ್ಕೆ ಮರುಳಾದ ಗೋವು
ಗಳೆಲ್ಲ 'ಮುಗಿದ ಕಣ್, ಎತ್ತಿದ ಮುಖ, ಇಳಿದ ಕಟವಾಯ ಹೊಸನೊರೆಗರುಂತೆ
ಗಳಿಂದ' [illegible]ಸುತ್ತಿದ್ದುವು. ಹುಲಿ–ಹುಲ್ಲೆ, ಹಾವು–ಮುಂಗುಸಿಗಳು ವೈರವನ್ನು
ಮರೆತು ಕಿವಿಗೊಡುತ್ತಿದ್ದವು. ಗಿಳಿ ಅಂಚೆ ಕೋಗಿಲೆ ಕೇಳಿ ನಲಿಯುತ್ತಿದ್ದುವು; ತರು
ಗಿರಿಗಳೂ ಎಳಸಿ ಕೇಳುತ್ತಿದ್ದುವು. ಈ ರೀತಿ ನಿಸರ್ಗವನ್ನೇ ತೃಪ್ತಿಪಡಿಸಿದ ಮೇಲೆ
ಈಶ್ವರನ ಮನ ಆತನ ಕೊಳಲ ಧ್ವನಿಯೊಳಗೆ ಮುಳುಗದಿದ್ದೀತೆ? ಆ ಧ್ವನಿ ಆನಾಯ
ನಾರನ ಹೃದಯದ ಉಸಿರು. ಗೋವು ಕಾಯುತ್ತಲೇ ಭಕ್ತಿ ಭಾವವನ್ನು ಬೆಳೆಯಿಸಿ
ಕೊಂಡ. ಆತನ ಕೊಳಲದನಿಯ ಸುಶ್ರಾವ್ಯತೆ, ಆತನ ಭಕ್ತಿಯ ಇಂಪನ್ನು ಲೋಕಕ್ಕೆ
ಪ್ರಕಟಪಡಿಸಬೇಕೆಂಬ ಹಂಬಲವುಳ್ಳ ಶಿವನು, ಒಂದುದಿನ ಒಂದು ಕಕ್ಕೆಯ ಮರದ
ಮೇಲೇರಿ ಕುಳಿತುಕೊಂಡಿರುತ್ತಾನೆ. ಶರಣನು ಭವಮೂರ್ತಿಯನ್ನಪ್ಪಿ, ತನ್ನ ಹೃತ್ಕಮ
ಲದೊಳಗಿರಿಸಿಕೊಂಡು ಮರದ ಮುಂದೆ "ಅಡ್ಡಂ ತಿಗಟಂ ಪರಿದಾಡಿ, ಕೊಳಲಿಂದ
ಪಂಚಾಕ್ಷರಿಯನೂದಿ ಹೆಚ್ಚಿ, ಹಿಗ್ಗಿ, ಸವಿದು, ಹೊರಗಿನ ದನಿಯನಾಲಿಸದಂತೆ.
ಆಡುತ್ತ, ಶಿವನನ್ನು ಧ್ಯಾನಿಸುತ್ತ' ತಲ್ಲೀನನಾಗಿರುತ್ತಾನೆ, ಇದೊಂದು ಕೊಳಲುವಾದ
ನದ ಉತ್ತಮ ದೃಶ್ಯನಿರ್ಮಾಣ ಹರಿಹರನಲ್ಲಿ. ತಿರುನೀಲಕಂಠಪಾಣರೂ 'ಗಾನವಿದ್ಯಾ
ವಿಶಾರದ'ರು ಶಿವದೇವಾಲಯಗಳಲ್ಲಿ ಅತ್ಯಂತ ಭಕ್ತಿಯಿಂದ ಭಕ್ತಿಯ ಹಾಡುಗಳನ್ನು
ಹಾಡುತ್ತಿದ್ದ ಶಿವಶರಣರು. ಅವರು ಸುಶ್ರಾವ್ಯವಾಗಿ ಹಾಡುತ್ತಿದ್ದ ಇನ್ನೊಂದು ದೃಶ್ಯ
ವನ್ನು ಕವಿ ಹೀಗೆ ವರ್ಣಿಸಿದ್ದಾನೆ ; ಕಣ್ಮುಚ್ಚಿ ಸಪ್ತಸ್ವರ, ತ್ರಿಸ್ವರದಿಂದ. ಮಲಹರಿ,
ಪಳಮಂಜರಿ, ಲಲಿತೆ, ವರಾಳಿ, ಕನ್ನಡ, ಗೌಳದೇಶಿ, ನಾಟಿ, ಬಹುಳಿ, ಶಾಂತಮಲ
ಹರಿ, ರಾಮಕ್ರಿಯಾ, ಶುದ್ಧಸಾಳ–ರಾಗಗಳನ್ನು ತಾರ ಮಧುರ ಮಂದ್ರವೆನಿಪ ತ್ರಿಪಾದ
ಗಳಿಂದ ಸೊಗಸಾಗಿ ಭಕ್ತಿರಸದಲ್ಲಿ ಹಾಡಿ ಹಲವು ಚಿತ್ರಗಳನ್ನು ನಿರ್ಮಿಸುತ್ತಾನೆ.

ಸಂಗೀತವು ಸ್ವತಂತ್ರವಾಗಿ ಹೊರಹೊಮ್ಮಿದಂತೆ ನೃತ್ಯದ ಜೊತೆಗೂ ಹೊರ
ಹೊಮ್ಮುತ್ತದೆ. ಸಂಗೀತವಿಲ್ಲದೆ ನೃತ್ಯವು ಹೊರಹೊಮ್ಮುವಂತಿಲ್ಲ, ಭೃಂಗೀಶ್ವರನ
ನಾಟ್ಯವನ್ನು ವಿವರಿಸುವಲ್ಲಿ ಅವುಜಗಳ ಧ್ವನಿಸುಧೆಯನ್ನು ಸೂಸುತ್ತಿತ್ತು ; ಕಹಳೆಯ
ಧ್ವನಿ ಸುಗತಿಯನ್ನು ಹೊರಹೊಮ್ಮಿಸುತ್ತಿತ್ತು; ಕರಡೆಯ ಧ್ವನಿ ಸೊಂಪನ್ನು, ಕೌಸಾ
ಳವು ಸಂಜ್ಞೆಯನ್ನು, ತಾಳಗಳು ನರ್ತನವನ್ನು ಹೊರಸೂಸುತ್ತಿದ್ದುವು ಎಂದು ವರ್ಣಿಸಿ
ದ್ದಾನೆ. ಮಲುಹಣನ ರಗಳೆಯಲ್ಲಿ ಮಲುಹಣೆಯ ನೃತ್ಯವನ್ನು ಹೀಗೆ ವರ್ಣಿಸುತ್ತಾನೆ:

"ಮುಂದಣ ರಂಗಭೋಗ ಮಂಟಪದೊಳಿತ್ತರಂಗೊಂಡೋಲಗವಿತ್ತು
ಕುಳ್ಳಿರ್ದ, ಪರಮಭಕ್ತರ, ಸಚಿವರ, ರಾಜಪುತ್ರರ, ವಡ್ಡವ್ಯವಹಾರಿಗಳ,
ಕಳಾವಿದರ, ಸತ್ಯರ, ಸಾಹಿತ್ಯರ, ವಿಳಾಸಿನಿಯರ, ಪುರಜನರ, ಪರಿಜ
ನದ, ನಡುವಣ ರಂಗಮಧ್ಯದೊಳ್ ನರ್ತನಂಗೊಡುವ, ತಾಳದ ಗತಿ

ಗೊಡುವ, ಮದ್ದಳೆಯಲಹಣಿಗೊಡುವ, ಆವುಜದ ದೆಖ್ಖಾಳಂಗೊಡುವ,
ಕಾಸಾಳದ ಹಲ್ಲಣಿಗೊಡುವ, ವಾಸದ ಲಲ್ಲೆಗೊಡುವ ಚೇಹಣಿಯವರ
ಸಂಗೀತದ ಸಂದಣಿಯೊಳ್...." ಎಂದು.

ಕುಂಬಾರ ಗುಂಡಯ್ಯನ ರಗಳೆಯಲ್ಲಿ ಮತ್ತೆ ಹರಿಹರಕವಿ ನಾಟ್ಯಗಳ ಪರಿಜ್ಞಾನ
ವನ್ನು ಪ್ರಕಟಿಸುತ್ತಾನೆ. ಘಟಗಳನ್ನು ಮಾಡುತ್ತ, ಹಾಡುತ್ತ ಕುಣಿಯುತ್ತಾನೆ;
ಭಕ್ತಿಭಾವದಿಂದ ಘಟಗಳನ್ನು ಬಾರಿಸುತ್ತಾನೆ. 'ಕುಣಿದಾಡುತೆ, ಮಡಕೆಗಳಂ
ಬಾರಿಸಿ, ಮಣಿದು ತೂಗಾಡುತ್ತಾನೆ'. ಇವನ ಕುಣಿತಕ್ಕೆ ಶಿವನೂ ಮೆಚ್ಚಿ ಕುಣಿ
ಯುತ್ತಾನೆ. ಆತನು ಘಟಗಳನ್ನು ಬಾರಿಸುವ ದನಿಗೆ ಶಿವನ ಪಾದಗಳ ಅಂದುಗೆ
ಘಲಕ್ ಎಂದೂ, ಕಟಕಧ್ವನಿ ಝುಣಕ್ ಎಂದೂ ನಾದ ಮಾಡುತ್ತವೆ.

ಸಂಗೀತ, ಗಮಕ, ನಾಟ್ಯಪ್ರೇಮಿಯಾಗಿದ್ದ ಕವಿ ರಾಘವಾಂಕನು 'ಗಾನ
ವಿನೋದಿ ಇರ್ದೊಡೇಂ ಜಾಣರಿಲ್ಲದೊಡೆ, ಕಳಾನ್ವಿತರ ನಿವಹವಿರ್ದೇನು ಕಲಾಪ್ರೌಢ
ರಿಲ್ಲದೊಡೆ' ಎಂದು ಕೇಳಿರುವಲ್ಲಿ ಮತ್ತು ಹರಿಶ್ಚಂದ್ರ ಕಾವ್ಯದಲ್ಲಿ ಸಂಗೀತ ನರ್ತನ
ವಿದ್ಯಾಪ್ರದರ್ಶನಕ್ಕೆಂದೇ ಒಂದು ಸನ್ನಿವೇಶ ರಚಿಸಿಕೊಂಡಿದ್ದಾನೆ. ಹೊಲತಿಯರು
ಹರಿಶ್ಚಂದ್ರನೆದುರು ಹಾಡಿ, ಕುಣಿದು ಆತನನ್ನೋಲಿಸಿದ ಸನ್ನಿವೇಶವೇ ಇದು. ಅಲ್ಲಿ
ಕವಿ ರಾಘವಾಂಕನು ಅವರು ಹಾಡಿ ನರ್ತಿಸಿದ ಪ್ರಸಂಗವನ್ನು ವರ್ಣಿಸಿದ ನುಡಿಗಳಿವು.
"ಗತಿ, ಗಮಕ, ಗಹಗಹಿಕೆ, ತಿರುಪು, ಬೌಳಿಯ, ಕೊಂಕು, ಜತಿ, ಜೋಕೆ,
ಮಾರ್ಗವಣೆ, ವಹಣಿ, ತರಹರಿಕೆ, ಕಂಪಿತ-ಹೊಂಪು, ಬಾಗು, ಡೊಕ್ಕರ ವಿವರ,
ತಾಳಾಸ, ತಮ್ಮವಣೆ, ಲೋಲಂಗಿತ, ನುತಶುದ್ಧ ಸಾಳಂಗ, ಸಂಕೀರ್ಣಮಂ ಯಥೋ
ಚಿತ ತಾರ, ಮಧುರ, ಮಂದ್ರಂಗಳಿಂ ಹಾಡಿ, ಭೂಪತಿಯ ದುಗುಡವನು ತೊಳೆ
ದರು ರಾಗರಸಲಹರಿಯಿಂದ ಅನಾಮಿಕ-ಸತಿಯರು". ಅವರು ದಂಡಿಗೆವಿಡಿದು
ಹಾಡಿದ್ದಾರೆ.

ಭೀಮಕವಿಯು ಬಸವಪುರಾಣದಲ್ಲಿ ಶಿವನ ಆಸ್ಥಾನದಲ್ಲಿ ನಡೆದ ಸಂಗೀತವನ್ನು
ವರ್ಣಿಸುವ ಮಾತುಗಳಿವು. "ತತ ವಿತತ ಘನ ಶುಷಿರ ವಾದ್ಯ ಪ್ರತಿಮಿಳಿತ ಷಡ್ಜಾದಿ
ಸಪ್ತಶೃತಿಳ ಇಂಪು ಉಗೆ, ಮಂದ್ರ ಮಧ್ಯಮ ತಾರ ವಿಶ್ರಮದ ಅತಿ ಮಧುರ, ಮೃದು
ಗೀತ, ಜಾತೋನ್ನತ ರಸದೊಳೊಡಗೂಡಿ ಪಾಡುತ ಚತುರ ತುಂಬುರ ನಾರದಾದ್ಯರು
ಮುಂದೆಸೆಯೊಳಿರಲು"—ಎಂದು ಬಸವಣ್ಣನ ಮದುವೆಯ ಪ್ರಸಂಗದಲ್ಲಿ ಬಂದ ಭಕ್ತರ
ಸಂತೋಷಕ್ಕೆಂದು ಭಂಡಾರಿ ಬಲದೇವನು ಭಕ್ತಾಸ್ಥಾನಂಗಳಲ್ಲಿ ಕೀರ್ತನ, ನಾಟಕ,
ಸಂಗೀತ-ಮೊದಲಾದುವುಗಳ ಮೇಳಗಳನ್ನು ಏರ್ಪಡಿಸಿದ್ದನು. ಆಗ "ರೀತಿಯಲಿ,
ಆನಂದಗೀತ ಸಮೇತ ತತಿಯೊಳು ಖ್ಯಾತರುದ್ರನ ಮಹಿಮೆಯನಂಕಿಸಿ ಪಾಡವರು
ಕೆಲವರು" ಎಂದು ಭೀಮಕವಿಯು ವರ್ಣಿಸಿದ್ದಾನೆ. ಇದಲ್ಲದೆ ಇನ್ನೂ ಅನೇಕ
ಪ್ರಸಂಗಗಳಲ್ಲಿ ಭೀಮಕವಿಯು ತನ್ನ ಸಂಗೀತ, ಕಲಾಭಿರುಚಿಯನ್ನು ವ್ಯಕ್ತಪಡಿಸಿ



ದ್ದಾನೆ. ಚಾಮರಸನೂ ಈ ಮಾತಿಗೆ ಹೊರತಾಗಿಲ್ಲ. ಸಂಗೀತದ ಅಭಿರುಚಿ ವೀರ
ಶೈವರಲ್ಲಿ ವಚನಕಾರರಿಂದಲೇ ಬಳುವಳಿಯಾಗಿ ಬಂದ ಆಸ್ತಿ ಎನ್ನಬಹುದು. ಬಸವ
ಪುರಾಣವನ್ನು ಹಾಡುವುದಕ್ಕೆ ಹಾಕಿದ ರಾಗ-ತಾಳಗಳನ್ನು ನೋಡಿದರೆ 'ಗಮಕ'ದ
ಪರಂಪರೆಯು ಹೇಗೆ ಬೆಳೆದಿತ್ತೆಂದು ಗೋಚರಿಸುತ್ತದೆ.

ಸಂಗೀತ ಶಾಸ್ತ್ರವನ್ನು ತಾತ್ವಿಕವಾಗಿ ಮತ್ತು ಪ್ರಾಯೋಗಿಕವಾಗಿ ವಿವೇಚಿಸು
ವಾಗ ಗಮನಕ್ಕೆ ಬರುವ ಇನ್ನೊಂದು ಪ್ರಮುಖ ಹೆಸರೆಂದರೆ ಶ್ರೀ ನಿಜಗುಣಶಿವಯೋಗಿ
ಗಳದು. ಅವರು ಪ್ರಸಿದ್ಧ ಕವಿಗಳೂ, ದಾರ್ಶನಿಕರೂ ಆಗಿದ್ದು ಕನ್ನಡದಲ್ಲಿ ಹಲವು
ಕೃತಿ ರಚಿಸಿದ್ದಾರೆ. ಅವರು ರಚಿಸಿದ 'ವಿವೇಕ ಚಿಂತಾಮಣಿ' ಕನ್ನಡದ ಪ್ರಥಮ
ವಿಶ್ವಕೋಶ. ಅವರು ಆ ಕೃತಿಯ ನಾಲ್ಕನೆಯ ಅಧ್ಯಾಯದಲ್ಲಿ ಸಂಗೀತ-ಶಾಸ್ತ್ರದ
ಸಂಪೂರ್ಣ ವಿವರಗಳನ್ನೇ ಕೊಟ್ಟಿದ್ದಾರೆ. ಗಮಕಿಯ ಲಕ್ಷಣವನ್ನು ಹೇಳುವಾಗ
"ತಾನಮಾನಂದೋರಿ, ವಿಶ್ರಮಣವರಿದು, ಪದನಂ ವ್ಯಕ್ತಿಗೆಯ್ದು, ಕೇಳ್ವರ ಕಿವಿ
ಗೊಳಿಸಿ, ಮೃದುಮಧುರ ವರ್ಣೋಚ್ಚಾರಂ ಮಾಳ್ಪ ಗಮಕಿಗಳಿಂ"-ಎಂದು ವಿವರಿಸಿ
ದ್ದಾನೆ. ಓಂಕಾರ, ಅದರಿಂದುದಿಸುವ ದಶವಿಧಧ್ವನಿ, ಮಧುರ ಮಂದ್ರತಾರ ಸ್ವರಭೇದ,
ಷಡ್ಜಾದಿ ಸ್ವರಗಳುತ್ಪತ್ತಿ, ಸ್ವರೋತ್ಪತ್ತಿ, ಕಾಲ, ಷಡ್ಜಾದಿಸ್ವರ ಧ್ವನಿಭೇದ, ಸ್ವರಜನ್ಮ
ನಕ್ಷತ್ರ, ಸ್ವರಗಳಿಂದ ಹುಟ್ಟುವ ಧ್ವನಿ, ಇಪ್ಪತ್ತೆರಡು ಶ್ರುತಿಗಮಕ, ಏಳು ದೇಶಿ ಗಮಕ,
ಗೀತ, ಗೀತಲಕ್ಷಣ, ರಾಗೋತ್ಪತ್ತಿಗೆ ಗ್ರಾಮತ್ರಯ, ಇವುಗಳಿಂದ ರಾಗಜನನ,
ಮೂವತ್ತಾರು ರಾಗ, ರಾಗಾಂಗ, ಭಾಷಾಂಗ, ಕ್ರಿಯಾಂಗ, ಮತ್ತು
ಉಪಾಂಗಗಳೆಂಬ ನಾಲ್ಕು ಅಂಗಗಳಿಂದ ಹುಟ್ಟುವ ಒಂದುನೂರಾ ಐವತ್ತೇಳು ರಾಗ
ಗಳು, ಪ್ರಸಿದ್ಧ ಮೂವತ್ತೆರಡು ರಾಗಗಳು, ಮಿತ್ರರಾಗ, ಗಾನವೈಖರಿ, ವಾದ್ಯಭೇದ,
ಇಪ್ಪತ್ತೆರಡು ತೆರನಾದ ತಂತಿವಾದ್ಯ, ಗಾಯಕಿಯರು, ಮದ್ದಳೆ, ಆವುಜಕಾರರು,
ತಾಳ, ಧೃವ, ಮಾತ್ರೆ, ಪ್ರಸ್ತಾರ, ತಾಳಭೇದ-ಇತ್ಯಾದಿಗಳನ್ನೂ ವಿವರ ವಿವರವಾಗಿ
ಕೊಟ್ಟಿದ್ದಾರೆ. ಅಲ್ಲದೆ ಅವರ ಕೈವಲ್ಯಪದ್ಧತಿಯ ಅನೇಕ ಹಾಡುಗಳು ಸಂಗೀತ
ಕ್ಕಾಗಿಯೇ ರಚಿತವಾಗಿದ್ದು ಇಂದಿಗೂ ಅವುಗಳನ್ನು ವೀಣೆ, ಏಕಧಾರಿಗಳ ಮೂಲಕ
ಹಾಡುತ್ತಾ ಬಂದಿದ್ದಾರೆ. ಭಕ್ತರ ತಂಡಗಳು, ಭಜನಾ ಮೇಳಗಳು, ನಿಜಗುಣಶಿವ
ಯೋಗಿಗಳ ಹಾಡು ಮಾತ್ರವಲ್ಲ, ಅನೇಕ ಸಂತ ಕವಿಗಳೂ ಅನುಭಾವಿಗಳೂ ಆದ
ಸರ್ಪಭೂಷಣ ಶಿವಯೋಗಿಗಳು, ಮುಪ್ಪಿನ ಷಡಕ್ಷರಿ ಶಿವಯೋಗಿಗಳು, ಘನಮಠ
ಶಿವಯೋಗಿಗಳು, ಮೈಲಾರದ ಬಸವಲಿಂಗ ಶರಣರು, ನೊಣವಿನ ಕೆರೆ ಕರಿವೃಷಭೇಂದ್ರ
ಸ್ವಾಮಿಗಳು, ತೂಡಲೂರು ಬಸವಲಿಂಗ ಶರಣರು ಇವರೇ ಮೊದಲಾದವರ ಹಾಡು
ಗಳನ್ನು ಸುಶ್ರಾವ್ಯವಾಗಿ ಹಾಡುತ್ತಾ ಬಂದಿದ್ದಾರೆ. ಶಿವನನ್ನು 'ವೀಣಾದಿಲೋಲ'
ಎಂದಿದ್ದಾರೆ ನಿಜಗುಣರು. ಹೀಗಾಗಿ ಸರಸ್ವತಿಯ ಎರಡು ಕಣ್ಣುಗಳಂತಿರುವ ಸಾಹಿತ್ಯ
ಸಂಗೀತಕ್ಕೆ ವೀರಶೈವ ವಚನಕಾರರು, ಅನುಭಾವಿಗಳು ಕೊಟ್ಟ ಕೊಡುಗೆ ಅಪೂರ್ವ
ವೆಂದೇ ಹೇಳಬೇಕು.

[ಫೆಬ್ರುವರಿ–ಮಾರ್ಚಿ 1982 ಸಂಚಿಕೆಯಿಂದ ಮುಂದುವರಿದ ಲೇಖನ]

## ಶ್ರೀ ಉದ್ದಾನೇಶ್ವರ ಶತಕ

—ಜೆ. ವಿ. ರಾಜಶೇಖರಯ್ಯ

ಗುರುವೆ ಕರುಣಾಕರನೆ ಸಜ್ಜನ
ಪರವೆ ಸಂಸೃತಿಹರನೆ ಶರಣಾ
ದರವೆ ವೇದದ ಶಿರನೆ ಜ್ಞಾನದ ತರುವೆ ಪರತರನೇ ।
ಮರವೆ ಮದಸಂಹರನೆ ಶಿವಮನು
ವರಿವೆ ಪುಣ್ಯದ ಕುರುವೆ ಗುಣಸಾ
ಗರವೆ ಗುರುವರ ದೇವನುದ್ದಾನೇಶ ದಯವಾಗೈ ॥೫॥

ಚರನೆ ಸುಮನೋಹರನೆ ಮಹದಾ
ದ್ಯರಿವೆ ಶೃತಿಯಾಗರವೆ ಪಾವನ
ದಿರವೆ ಹತವಿಧಿ ಶಿರವೆ ಮಹಿಮಾದರವೆ ಶಿವನರಿವೆ ।
ಶರಣ ಸುಮನಸ್ಸರವೆ ಭಾವದ
ಭರವೆ ಮನಸಿಜ ಹರನೆ ಪಾವನ
ತರನೆ ತೊರೆಯದೆ ಕರುಣಿಯುದ್ದಾನೇಶ ದಯವಾಗೈ ॥೬॥

ಲಿಂಗ ಕರುಣಾಪಾಂಗ ದುರಿತ ವಿ
ಭಂಗ ಪ್ರಣವ, ಷಡಂಗ ಮನುಮುನಿ
ಸಂಗ ವೇದವಿಹಂಗ ದಹಿತಾನಂಗ ಮಹದಂಗಾ ।
ಶೃಂಗಿವಹ ತತ್ವಾಂಗ ಶಿರಧೃತ
ಗಂಗ ಜ್ಞಾನ ತರಂಗ ಭುವನೋ
ತ್ತುಂಗ ಮಂಗಳ ಗುರುವೆ ವುದ್ದಾನೇಶ ದಯವಾಗೈ ॥೭॥

ನಿನ್ನ ರೂಪನಿದಾರು ತತ್ವವು
ನಿನ್ನ ಕಠಿಣತೆ ಧರೆಯು ರಸನೀ
ರಿನ್ನು ಬೆಳಕೇ ಬೆಂಕಿಚಲನೆಯೆವಾಯುವಾ ಭಳಿಕಾ ।
ನಿನ್ನ ಅವಕಾಶತೆಯೆಗಗನವು
ನಿನ್ನ ಚೇತನ ರೂಪಿದಾತ್ಮನು
ಪನ್ನಗೇಶಾಭರಣನುದ್ದಾನೇಶ ದಯವಾಗೈ ॥೮॥

(ಮುಂದುವರಿಯುತ್ತದೆ.)



## ಕವಿ–ಕಾಮಿ–ಹುಚ್ಚರು

೧

ಅವನೊಬ್ಬ ಹುಚ್ಚ
ಬುದ್ಧಿಯದು
ಸ್ವಾಧೀನವಿಲ್ಲದು ನೋಡ !
ಇದೊಂದು ಕಾಮಿ
ಬುದ್ಧಿಯದು
ಸ್ವಾಧೀನವಿಲ್ಲ ಇದಕೆ !
ಈ ನರನು ಕವಿ
ಮನವದು
ಸ್ವಾಧೀನವಿಲ್ಲಿವಗೆ ನೋಡ !

೨

ನರಕ ಕೂಪಗಳ
ತುಂಬಿ ತುಳುಕಿ
ಚೆಲ್ಲಿಬರುವ ದೆವ್ವ
ಭೂತಗಳ
ಸೃಷ್ಟಿಸುತಿರುವ ಇವ,
ಇವನೊಬ್ಬ ಹುಚ್ಚ

೩

ಹಾದಿ ಕರಿಪಿಯ ನೋಡಿ
ದಿವಿಜ ಲೋಕದಿಂದಿಳಿದ
ಅಪ್ಸರೆ,
ನಾಟ್ಯದಪ್ಸರೆ-
ಎನ್ನುತೆ ಸ್ವಾನದಪರಿ
ಹಿಂದೆಬಿದ್ದು
ಶೃಂಗಾರ ಲೋಕವನೆ
ಸೃಷ್ಟಿಸುವ
ಹುಚ್ಚನಿವ–ಕಾಮಿ !

೪

ಬ್ರಹ್ಮಾಂಡ ಕಾಣದ
ಬ್ರಹ್ಮ ಸೃಷ್ಟಿ ನೋಡದ
ತಳಹದಿ ಶೂನ್ಯದ
ಮನಕದ ತೋರಿದ
ಪ್ರಜೆಗಳ
ರಾಜ್ಯಗಳ ಮಂತ್ರಿಗಳ
ರಾಕ್ಷಸರ
ನಿಮಿಷ ನಿಮಿಷಕೆ ಸೃಷ್ಟಿಸಿ
ಮೆಲುಕು ಹಾಕುವ
ಹುಚ್ಚನಿವ–ಮಹಾಕವಿ !

೫

ಶೃಂಗಾರ ಕವಿ
ಜನಕೆ ಡೊಂಬರ
ಪರಬೊಮ್ಮ ಕಾಮಿ
ಜನಕೆ ನಟ
ಶಿವಗೆ ಶರಣ
ಜನಕೆ ಹುಚ್ಚ.

೬

ಹುಚ್ಚನಾದರು ಒಂದೇ
ಕಾಮಿಯಾದರೂ ಒಂದೇ
ಕವಿಯಾದರೂ ಒಂದೇ
ಇವರ್‍ಯಾರಿಗೂ
ಈ ಲೋಕದಲಿ ಸ್ಥಳವಿಲ್ಲ
ಬೇರೆ ಲೋಕವಿಲ್ಲ ॥

—ಎಂ. ಜಿ. ವೆಂಕಟೇಶಯ್ಯ

# "ಲಂಘನಂ ಪರಮೌಷಧಂ"

—ಎಂ. ಗಣೇಶ್

ಉಪವಾಸ ಪದ್ಧತಿ ಅಥವಾ ಲಂಘನ ಚಿಕಿತ್ಸೆಯು ಪ್ರಾಚೀನ ಕಾಲದಿಂದಲೂ ನಮ್ಮ ದೇಶದಲ್ಲಿ ಅಸ್ತಿತ್ವದಲ್ಲಿತ್ತು. ಇದು ಆಯುರ್ವೇದ ಮತ್ತು ನಿಸರ್ಗ ಚಿಕಿತ್ಸೆ—ಎರಡು ವೈದ್ಯ ವಿಜ್ಞಾನಗಳಲ್ಲೂ ವಿಧಿತವಾಗಿದೆ. ಪ್ರಾಚೀನ ಕಾಲದಿಂದಲೂ ಭಾರತೀಯರು ಹಬ್ಬಹರಿದಿನಗಳ ನೆವದಿಂದ ಉಪವಾಸವನ್ನು ಆಚರಿಸುತ್ತಿದ್ದರು. ಆದರೆ ಕಾಲ ಕಳೆದಂತೆ ಉಪವಾಸ ಚಿಕಿತ್ಸೆಯ ರೂಪವೇ ಬದಲಾವಣೆಯಾಗುತ್ತಾ ಬಂತು. ಉಪವಾಸವೆಂದರೆ ಅಕ್ಕಿಯಿಂದ ಮಾಡಿದ ಪದಾರ್ಥ ಮಾತ್ರ ಸೇವನೆಗೆ ನಿಷಿದ್ಧವೆಂಬ ಅಭಿಪ್ರಾಯ ಜನರಲ್ಲಿ ಈಗ ಮೂಡಿದೆ. ಎಂದೂ ಸೇವಿಸಿಲ್ಲದಷ್ಟು ಹಣ್ಣುಹಂಪಲು ಮೊದಲಾದ ಫಲಾಹಾರ ಸೇವನೆಗೆ ಉಪವಾಸವೆಂದು ಜನರ ಅಭಿಪ್ರಾಯವಾಗಿದೆ. ಆದರೆ ಕೆಲವರಾದರೂ ಇದರ ನೈಜ ಸ್ವರೂಪವನ್ನರಿತಿದ್ದರಿಂದ ಅದು ಇಂದೂ ಉಳಿದಿದೆ.

ನಾವು ಜನಿಸಿದ ದಿನದಿಂದ ಸಾಯುವವರೆಗೆ ನಮ್ಮ ಜೀರ್ಣಾಂಗಗಳು ಕಾರ್ಯೋನ್ಮುಖವಾಗಿರುತ್ತವೆ. ಅವುಗಳಿಗೆ ವಿಶ್ರಾಂತಿ ಅಗತ್ಯ. ಈ ವಿಶ್ರಾಂತಿ ಕೊಡದಿದ್ದರೆ ದೇಹದ ಮೇಲೆ ದುಷ್ಪರಿಣಾಮವುಂಟಾಗಬಹುದು. ಉಪವಾಸ ಮಾಡುವುದರಿಂದ ಅನೇಕ ರೋಗಗಳು ಗುಣವಾಗುತ್ತದೆ. ಉಪವಾಸ ಚಿಕಿತ್ಸೆಯನ್ನು ನಿಸರ್ಗ ಚಿಕತ್ಸೆಯ ವೈದ್ಯ ವಿಜ್ಞಾನದಲ್ಲಿ ಆಕಾಶ ಅಥವಾ ಅವಕಾಶ ಚಿಕಿತ್ಸೆಯೆನ್ನುತ್ತಾರೆ.

ಉಪವಾಸ ಪ್ರಾರಂಭಿಸುವ ದಿನ ಅಂತಿಮ ಆಹಾರ ಸೇವನೆಯ ನಂತರ ಮತ್ತೆ ಆಹಾರ ಮುಟ್ಟಬಾರದು. ಮೊದಮೊದಲು ದ್ರವ ಆಹಾರ, ನಂತರ ಹಾಲು, ಹಣ್ಣಿನ ರಸ ನಂತರ ಬರಿಯ ನಿಂಬೆಯರಸ ಅಥವಾ ನೀರನ್ನು ಮಾತ್ರ ಸೇವಿಸಬೇಕು. ಉಪವಾಸದ ಅವಧಿಯಲ್ಲಿ ದೇಹಕ್ಕೆ ಚಿಕಿತ್ಸೆ ನೀಡುತ್ತಿರುವಂತೆ ಮನಸ್ಸಿಗೂ ಕೊಡುವುದು ಉತ್ತಮ. ಅಂದರೆ ಈ ಅವಧಿಯಲ್ಲಿ ದೇವರ ನಾಮಸ್ಮರಣೆ ಮಾಡುವುದು ಒಳ್ಳೆಯದು.

ಉಪವಾಸವನ್ನು ಇದ್ದಕ್ಕಿದ್ದಂತೆ ಒಮ್ಮೆಲೇ ನಿಲ್ಲಿಸುವುದು ಅಪಾಯಕರ. ಉಪವಾಸವನ್ನು ಪ್ರಾರಂಭಿಸಿದ ರೀತಿಯಲ್ಲೇ, ಹಂತಹಂತವಾಗಿ ಮುಗಿಸಬೇಕು. ಮೊದಲು ನೀರು ನಂತರ ತಿಳಿಯಾದ ಹಣ್ಣಿನ ರಸ, ನಂತರ ಹಾಲು, ತದನಂತರ ದ್ರವರೂಪದ ಆಹಾರ, ಕೊನೆಗೆ ಘನಾಹಾರ ಸೇವಿಸಬೇಕು. ಈ ಚಿಕಿತ್ಸೆಯನ್ನು ಒಂದೇ ದಿನ ಮಾಡಬಹುದು ಅಥವಾ ನಿಮಗೆ ಸಾಧ್ಯವಾದಷ್ಟು ದಿನ ಮಾಡಬಹುದು. ಆದರೆ ಇದಕ್ಕೆ ವೈದ್ಯರ ಸಲಹೆ ಕೇಳುವುದು ಕ್ಷೇಮಕರ.

LICENCED TO POST WITHOUT PRE PAYMENT LICENCE NO. 3

SIDDAGANGA Monthly Reg No. KRN Q-9

## ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಶಿವಯೋಗ ಸಮಾಧಿ ಕಟ್ಟಡ ನಿಧಿ ಮನವಿ

ಸುಕ್ಷೇತ್ರ ಧರ್ಮಕ್ಷೇತ್ರ ಶ್ರೀ ಸಿದ್ಧಗಂಗಾ ಮಠಾಧ್ಯಕ್ಷ ಪರಮಪೂಜ್ಯ ನಿರಂಜನ ಪ್ರಣವ ಸ್ವರೂಪಿ **ಡಾ॥ ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು** ಐವತ್ತೆರಡು ವರ್ಷಗಳಿಗೂ ಮಿಗಿಲು ಜನಸೇವೆ ಸಲ್ಲಿಸಿ ಕೀರ್ತಿಭಾಜನರಾಗಿದ್ದಾರೆ. ದೀರ್ಘಾವಧಿ ತಮ್ಮ ಅವಿಶ್ರಾಂತ ದುಡಿಮೆಯಿಂದ ಶ್ರೀ ಮಠದ ಸರ್ವತೋಮುಖವಾದ ಪ್ರಗತಿಯನ್ನು ಸಾಧಿಸಿ ಜನತೆಯ ಪ್ರೀತಿ, ವಿಶ್ವಾಸಗಳಿಗೆ ಪಾತ್ರರಾಗಿದ್ದಾರೆ. ಪ್ರಾಪಂಚಿಕ ಮತ್ತು ಪಾರಮಾರ್ಥಿಕ ಎರಡೂ ಕ್ಷೇತ್ರಗಳಲ್ಲಿ ಬೃಹತ್ತಾದ ಸೇವೆ ಸಲ್ಲಿಸಿದ್ದಾರೆ. ಪೂಜ್ಯ ಸ್ವಾಮೀಜಿಯವರ ದಿವ್ಯ ನೇತೃತ್ವದಲ್ಲಿ ಸಿದ್ಧಗಂಗೆಯಲ್ಲಿ ಮತ್ತು ರಾಜ್ಯದ ನಾನಾ ಭಾಗಗಳಲ್ಲಿ ವಿದ್ಯಾ ಸಂಸ್ಥೆಗಳನ್ನು ಸ್ಥಾಪಿಸಲು ಸಿದ್ಧಗಂಗೆಯಲ್ಲಿ ನಡೆದಿರುವ ಕಾರ್ಯಚಟುವಟಿಕೆಗಳು ವರ್ಣನಾತೀತ. ಎಲ್ಲ ಕ್ಷೇತ್ರಗಳಿಗೆ ಪೂಜ್ಯಪಾದರ ಸೇವಾಹಸ್ತ ಪ್ರಸರಿಸಿದೆ. ಶಿಕ್ಷಣ, ಸಮಾಜ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಪವಾಡವೆಸಗಿದ್ದಾರೆ.

ಶ್ರೀಗಳವರ ಜೀವಮಾನದಲ್ಲಿ ಎಪ್ಪತ್ತೈದು ವರ್ಷಗಳು ಮುಕ್ತಾಯವಾಗಿವೆ. ಕಳೆದ ವರ್ಷ ಕ್ಷೇತ್ರದಲ್ಲಿ ಸೇರಿದ ಭಕ್ತ ಮುಖಂಡರ ಸಮಾವೇಶದಲ್ಲಿ ಪೂಜ್ಯ ಸ್ವಾಮೀಜಿಯವರಿಗೆ ಒಂದು **"ಶಿವಯೋಗ ಸಮಾಧಿ ಕಟ್ಟಡ"** ವನ್ನು ಕ್ಷೇತ್ರದ ಅತಿಮುಖ್ಯವಾದ ಭಾಗದಲ್ಲಿ ನಿರ್ಮಿಸಲುದ್ದೇಶಿಸಿ ಕಾರ್ಯಾರಂಭ ಮಾಡಿರುತ್ತೆ. ಉದ್ದೇಶಿತ ಕಟ್ಟಡವನ್ನು ಶಿವಯೋಗ ತತ್ವಗಳ ಆಧಾರದ ಮೇಲೆ ಧರ್ಮ ಸಂಕೇತವಾಗಿ ಅತ್ಯಂತ ಆಕರ್ಷಣೀಯವಾಗಿರುವಂತೆ ಯೋಜಿಸಲಾಗಿದೆ. ಪೂರ್ಣವಾಗಿ ಸುಂದರವಾಗಿ ರೂಪುಗೊಳ್ಳಲಿರುವ ಈ ಮಂದಿರದಲ್ಲಿ ಪ್ರಶಾಂತ ಪ್ರಾರ್ಥನಾ ಮಂದಿರವೂ ಸೇರಿರುತ್ತೆ. ಮಂದಿರದ ಒಟ್ಟು ವೆಚ್ಚ ಹತ್ತು-ಹನ್ನೆರಡು ಲಕ್ಷ ರೂಗಳಿಗೆ ಅಂದಾಜು ಮಾಡಲಾಗಿದೆ.

ನಮ್ಮ ಪ್ರದೇಶದ ಭಕ್ತಜನರ ಪರವಾಗಿ ಈ ಮಂದಿರದ ಪೂರ್ಣ ವೆಚ್ಚವನ್ನು ಭರಿಸಲುದ್ದೇಶಿಸಲಾಗಿದೆ. ತಾವು ಶ್ರೀ ಮಠದ ಉಜ್ವಲ ಅಭಿಮಾನಿಗಳು. ಪೂಜ್ಯಪಾದರಲ್ಲಿ ಅಪಾರ ಭಕ್ತಿಯುಳ್ಳವರು. ತಾವು ಈ ಕಾರ್ಯಕ್ಕೆ ಉದಾರವಾಗಿ ಸಹಾಯ ಮಾಡಿ ಆ ಯೋಜನೆಯು ಸಂಪೂರ್ಣವಾಗಲು ಸಹಕರಿಸಬೇಕಾಗಿ ವಿನಂತಿ.

ಶ್ರೀ ಸಿದ್ಧಗಂಗಾ ಕ್ಷೇತ್ರ

ದಿನಾಂಕ : 15-10-82

**ಭಕ್ತ ಮಂಡಲಿ**

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.